ತರಂಗಿಣಿ

ಮಲ್ಲಿಕಾ

ಚತುರ್ಮುಖ ಮುಖಾಂಬೋಜ
ವನಹಂಸ ವಧೂರ್ಮಮ ।
ಮಾನಸೇ ರಮತಾಂ ನಿತ್ಯಂ
ಸರ್ವ ಶುಕ್ಲಾ ಸರಸ್ವತೀ ॥

"ಶ್ರೀಭವಾನೀಪಾದಾರ್ಪಣವಸ್ತು"

# ತರಂಗಿಣಿ

-ಮಲ್ಲಿಕಾ

**ಲಕ್ಷ್ಮೀ ಪ್ರಕಾಶನ**
359, ಸದಾಶಿವನಗರ
ಬೆಂಗಳೂರು - 560 080

ಈ ನವೋದಿತ 'ತರಂಗಿಣಿ'
ತೊಂಭತ್ತೊಂದು ಸಾನೆಟ್ಟು
ಗಳ ಸಣ್ಣ ಗಾಯಣ ತೂರ್ಯ ;
ಗ್ರೀಷ್ಮ ಪ್ರಭಾತದಲಿ ಉದಿಸಿ
ಫಾಲ್ಗುಣ ಪ್ರಭಾತದಿ ಮಲರಿದ
ಮನಃ ತರಂಗ.

## ಪರವಿಡಿ

# ತರಂಗಿಣಿ

## ನುಡಿವಕ್ಕಿಗಳಿರಾ!

ಓ, ಎನ್ನ ಚಿಣ್ಣ ಚಿಣ್ಣ ನುಡಿವಕ್ಕಿಗಳಿರಾ!
ಜಗದುಸಿರಿಗೆ ಹಾತೊರೆದಿಹ ಚಾದಗೆಗಳಿರಾ!

ಕಲಿಕಾಲದಲೆಗಳಲಿ ತೇಲಿಬಿಡುವೆ ನಿಮ್ಮನು
ಗರಿ ಬಲಿಯದಿಹ ಮರಿಯೆನೆ ಎದೆಯಳುಕಿ ಮೆಲ್ಲನೆ;

ಎನಿತು ಸಮಯ ಸಂತು ಮನದೊರತೆ ತುಳುಕಿ ಹರಿದು
ನುಡಿ ನುಡಿಯ್ಯೆಸಿ ಸಾಲು ಸಾಲೆನೆ ತವ ಕೋದು?

ತಾಯ್ವಕ್ಕಿ ಸಂಜೆಗೂಡಿ ಬರೆ ಮರಿಗಳ ಕರೆದು
ಗೂಡುಗೊಳಿಪಂತೆ, ನಿಮ್ಮ ಗ್ರಂಥಸ್ತಗೊಳಿಪ್ಪೆ

ಭವದಿ ಚೆಲ್ಲಿ ಹೋಹಂದದಲಿ ಜುಗುಳಿ ಪಿಂತಿರ್ಕಿ!
ಓ! ಚಣಮರೆತು ನನ್ನವೆಂದೆ ನುಡಿ ಬಾಯ್ತಪ್ಪಿ.

ನೀವಂದು ಹೊರವಂಟನುಪಥದೊಳೆ ಮನವೊಪ್ಪಿ
ಎದೆಯ ಹಕ್ಕಿಯನರಗಳಿಗೆ ನಲಿದುಲಿಸಿದಲ್ಲಿ

ನನ್ನವೆನಲೆಂತು? ತೋಂಟದಿ ಪಾಂಥನಿಳಿದಲ್ಲಿ
ಎಂತೊಡಾಂತು ನೀವಾದಿರಿ ನುಡಿವಕ್ಕಿಗಳಿರಾ!

— o —

# ಜಗಜ್ಜನನಿಗೆ

ದಿವ್ಯಮೀ ಋತಾಗ್ನಿ ಬೆಳಗೆ ವಿಶ್ವವಿಶ್ವಗಳ
ಸೃಜಿಸಿ ನಿತ್ಯ ನಿಯಂತ್ರಿಸುತ ಜೀವ ಕೇಂದ್ರದಲಿ
ಬ್ರಹ್ಮ ಚಿತ್ತಾಗಿ ಚಿತ್ತ ವೃತ್ತಿಯನುಜ್ವಲಿಸಿ
ಅನೃತವನೊತ್ತಿ ತುಳಿವೆ ಋತಶಕ್ತಿ ನೀನೈಸಿ!
ಎಂತು ಬಣ್ಣಿಸಲಿ ನಿನ್ನ? ಅದಾವ ದೃಗ್ವಸ್ತು
ಪ್ರತಿನಿಧಿಪುದು ನಿನ್ನಂ ಹೇಳೌ ಹೆ ಜಗಜ್ಜನನಿ!
ನಭಸದೃಶಮೆನೆ ಅತಿ ಬಿತ್ತರಂ. ವನತುಲ್ಯ
ಎಂಬೆನೆ ಅದೆನಿತು ಛಿದ್ರ ಛಿದ್ರಂ? ಸರ್ವತ್ರ
ಋತುಮಾನಕೆ ಸರಿಯೆಂಬೆನೆ ಅದಲ್ಪಂ ನಿನ್ನ
ಮಹೋದಯದೆತ್ತರಕೆ. ಇನ್ನೆಂತು ಓಲೈಸಲಿ?
ತಾಯಿ, ಬಾರೌ ! ನಿನ್ನವತರಣ ಎನ್ನುದ್ಧರಣ!
ನೀನಹೆ ಶಿವನೀರೆಯನೆ ಗಣಪನೆತ್ತಿ ಬಾ!
ಅಜಸತಿಯೆನೆ ಬೀಣೆಯೊಡನೆ ಬಾ! ಜಗಜ್ಜನನಿ
ಎನೆ ತ್ರಿಶೂಲವನಾಂತು ಎನ್ನೆದೆಯ ಗುಡಿಗೆ ಬಾ!

— o —

# ಸಚ್ಚಿದಾನಂದ

ಆನಂದ! ಸಚ್ಚಿದಾನಂದ! ಪರಮಾನಂದ!
ಎಂತು ಬಣ್ಣಿಸಲಿ ನಿನ್ನಯ ಅಸೀಮಾನಂದ?

ಸತ್-ಚಿತ್ ಬ್ರಹ್ಮಾನಂದಮಯ ವೈಭವ ಸಂಭ್ರಮ!
ನಿನ್ನ ಶೀತಲೋಜಸ್ವಿತೆಯೆನ್ನ ಶ್ವಾಸವಂ

ಇನ್ನೆಗಂ ನಡೆಸಿರ್ಪುದಾದೊಡಂ ಮತ್ತಾವ
ಶಂಕೆ? ಕಾವೆ ಸುಪ್ತಸ್ಮೃತಿ ಹೇಳಿಗೆಯಂ ಕುಕ್ಕಿ

ನೀ ಮಲರ್ದು ಮುನ್ನಡೆಯಿಸುವನ್ನೆಗಂ ದೇವ!
ಒರ್ಮೆ ಕೆರಳಿತೆನೆ ಸತ್ ಕಲ್ಪನೆಯ ಚಿತ್ ಬೆಂಕೆ

ಜನ್ಮಜನ್ಮಗಳೀತಿ ಬಾಧೆಯತಿ ಭಯಭೀತಿ
ಬೆಬ್ಬಳಿಪ ಒಡಲ ವಿರಹ ಸಂಕಟಮಿತ್ಯಾದಿ

ಉರುಳಿ ಪೋಪುದೈ ಮಾಗಿಯ ಹಣ್ಣೆಲೆಗಳೆತ್ತು!
ಎನ್ನಾತ್ಮ ತವಸಿ ನಿನ್ನಯ ಬ್ರಹ್ಮಜ್ಞಾನದಾ

ಹಂಬಲದಿ ಭ್ರಮಿಸಿ ನೀನಲ್ಲದಾರು ಆನಂದ
ದೀಕ್ಷೆ ನೀಡುವರೈ ಹೇ ವರ ಸಚ್ಚಿದಾನಂದ?

— ೦ —

# ಹಿಮಾಲಯ

ಉನ್ನತೋನ್ನತ ಭೀಮಕಾಂತ ಶ್ರೀ ಹಿಮವಂತ!
ಭವ್ಯ ಕಾನನಾಭೀಲ ಚರಣತಲ ಪ್ರಸ್ಥಾ!

ಸುರಮ್ಯ ತಪೋವನ ಬ್ರಹ್ಮಾನಂದ ಸ್ವರೂಪಂ,
ಅಧಿಮಾನಸ ಊರ್ಧ್ವಾನ್ವೇಷಣ ಸುಪ್ರತೀಕಂ

ಅದ್ಭುತಂ ವ್ಯೋಮ ಚುಂಬೀ ಕಾಲ ಪರ್ವತಂ!
ಅನಾದಿ ಸಂಪೂಜಿತಂ ಭಾರತ ವರ ರಕ್ಷಂ

ಮಾನಿತಂ ಹಿಮಮಣಿ ಮುಕುಟಧರಂ, ನಗಾಧಿಪ!
ದೇವದೇವಿಯರನೇಕಾನೇಕ ಮಂದಿರಂ,

ಸೋಮಾಶ್ರಮ ಮಾನಸ ಸರೋವರ ಹರಿದ್ವಾರ
ಪರಶುರಾಮಕುಂಡ ಇಂದ್ರಕೀಲ ಇತಿ ಕ್ಷೇತ್ರ

ಸಂಘಟಂ ಶಿವ ಸಂಭ್ರಮ ಕೇಲೀ ಕೈಲಾಸಂ!
ವಿಂದುಸರ ಹಿಮಹೃದಯ ಸಂಭವೇ ಹೈಮವತಿ

ಸಪ್ತ ಪಥ ವಿಜಯಗಾಮಿನಿ; ಇಂತು ಮಹ್ಕೃತ
ಶರೀರಂ ವರ್ಣನಾತೀತಂ ಹೇ ಹಿಮಾಲಯ!

— o —

# ಭಾರತ ಜನನಿಗೆ

ಅದ್ಭುತ ಗಹನವೈಸಲೆ ತವ ಸನ್ನಿಧಿ ಜನನಿ!
ಸುಖದುಃಖ ಚಿಂತನೆಯ ಸಹನಶೀಲ ಮಾನಿನಿ!
ನಿನ್ನ ಹೊನ್ನುಡಿದುಂಬಿಹ ಮಧುಮತ್ತ ಮನದಾ
ಕೆಂಗಣ್ಣಿನ ಶೂಲೇಶ್ವಾಸದ ದುರಾಸೆ ಮದ
ಮಾತ್ಸರ್ಯವೆತ್ತ ನೀಲಗ್ರೀವದ ಹೊನ್ನೊಡವೆ
ಸಿಂಗರದ ಹೀನತೆಯೆ ಮೈದಳೆದ ಮೇಣ್ದಿವ್ಯ
ವೀಭೂತಿಗಳ ಪಡೆದೆ ಸಮತೋಲ ಭಾವದಿಂ
ಹೇ ಜನನಿ! ಸರ್ವತ್ರ ಸದಾ ಕಾಯ್ದೈ ಭವದ
ಓರೆಕೋರೆಯ ತಿದ್ದಿ ಮತಭಿನ್ನತೆಯ ತೊಡೆದು
ಛಿದ್ರ ಮನದ ನರನರರನೇಕಿಸಿ ಬಾಳಿಸೈ
ಮೂಗಾಲವು ನುತಿಪೆ ಕರತಾಳವಿಕ್ಕಿ, ಬೀಣೆ
ಬಾಜಿಸಲ್ ಸಂಗೀತವ ನಲವಿಂದ ಗೀತಿಸಿ;
ಡಮರುಗಂ ಘಲ್ ಘಲ್ಲೆನಲ್ ತವ ಸರ್ವಾಂಗೀಣ
ಆರಾಧನೆಯೆಮ ಕರ್ಮವಖಿಲಂ ಹೇ ಮಾತೃಕೆ!

— ೦ —

# ಸೊಗಯಿಸೈ

ಸೊಗಯಿಸೈ; ಸೊಗಯಿಸೈ; ಹೆ ಸುಂದರ ಬಾನಾಡಿ!
ನೀಲ ರೆಂಕೆಯ ಬಿಚ್ಚಿ ಹಿಗ್ಗಲಿಸಿ ಹಾರಾಡಿ!

ಅಗಲಗಲ ಬನದಗಲ ಊರಗಲ ಪಾರುತಲಿ
ಸಂಯಾತ್ರಿಪೆ ಸರ್ವತ್ರ ಸುಖಿಸುವೆನೆ ಪಾಡುತಲಿ.

ಒಡಲಿಗೆ ದುಡಿಯುವ ಗೋಜಿನಿತಿಲ್ಲ; ನಿಡುಪಗಲ
ತಾರಗೆಯೆನೆ ಶೋಭಿಷೆ ತನಿವ ಮುಗಿಲನಾಶ್ರಯದಿ.

ಬಾನೊಡೆಯನ ಮಿಂಚಿನ ಕಾಂಚನ ಹೊನಲಲದ್ದಿ
ಮಿರು ಮೆಯ್ಯನು ಹೊಂಗಲಿಸಿ ಕರೆವಿಂಚರ ಕೋದು

ಇನಿಧಾರೆಯನೆರಚುವೆ ಮನಮಲೆತು ತೇಲಾಡಿ!
ಮುಗಿಲುಟ್ಟುವೆನೆನಿಸೆ ಧೂಮಲಿಸಿ ಓಲಾಡಿ

ನಿತ್ಯಗಾಯಣತೂರ್ಯ ಜೈತ್ರಯಾತ್ರೆಯ ಪೆರ್ಮೆ
ಸುಜೀವನ ಸುರಾಪಾನದ ಪಾಂಗಿನೊಳ್ ಕೂರ್ಮೆ

ಘನಿಸಿ ಸ್ವಚ್ಛಂದ ಭಾವದಿಂ ಕವನಿಪ ಕವಿಯೊ
ಎನಲ್ ಹರ್ಷಾವೇಶದಿಂ ಸೊಗಯಿಸೈ ಪಕ್ಷಿಯೆ!

— o —

# ಕೌಸಲ್ಯೆ

ದೇಶ ಕೋಶಲಂ ಪುತ್ರಿಯೈಸಿ ಕಳೆಯೆ ಬಾಲ್ಯಂ.
ರಸ ಋಷಿಗಳಿಂ ಪಡೆದು ವಿದ್ಯೆಯಂ ಬಹುಮೂಲ್ಯ

ಸ್ವರ್ಣ ಪುತ್ಥಳಿಯೈಸಿ ಬಾಳಿದ ಸತಿ ಕೌಸಲ್ಯೆ!
ದಶರಥನ ಕೈಪಿಡಿದು ನೀ ಪಟ್ಟವರಸಿಯೆನೆ

ವಿಜೃಂಭಿಸಿದೆ ಅಯೋಧ್ಯೆಯ ಭಾಗ್ಯಶ್ರೀಯಾಗಿ!
ಕಿರಿಯ ರಾಣಿಯರೆಂದು ಹೃನ್ನಾಥಂ ಸುಮಿತ್ರಾ

ಕೈಕೆಯರನಾಯ್ದು ಕೊಳೆ ಪರಿತಪಿಸಿದೆಯೇಂ ಕರುಬಿ?
ಸಮಭಾವದಿ ಭರಿಸಿದೆಯಲ್ತೆ ಅಕ್ಕರೆ ತುಂಬಿ !

ಶ್ರೀ ರಘುವರಂಗೆ ಜನ್ಮವ ನೀಡೆ ಸಾಮಾನ್ಯ
ಮಹಿಳೆಗೆಂತು ಶಕ್ಯಂ ಹೆ ಅಪೂರ್ವ ಮಾನಿನೀ!

ಲೋಕಾಭಿರಾಮನಂ ಸತ್ಕೀರ್ತಿ ನಾಮನಂ
ಜಗಕಿತ್ತ ಮಾತಾಮಯಿ ತ್ರಿಲೋಕ ಪೂಜಿತೇ!

ಎನ್ನ ಶಿರ ಮುಡಿಯಂ ಮಣಿವೆ ನಿನ್ನಡಿಗಳಲ್ಲಿ
ನಿತ್ಯಂ ಹೆ, ಮಹಾ ಭಾರತಿ! ಅನುಗ್ರಹಿಸೆನ್ನ.

— ೦ —

# ಸರಿದ್ವರಾ

ಅಹಃ! ಏಂ ಘನ ಪುಣ್ಯ ನೀಲಾಭ ವಾರಾಶಿ!
ಬ್ರಹ್ಮ ಚಿತ್ತ ನಿರ್ದ್ವಂದ್ವ ಶರಧಿಯ ಪರಿವೇಶಿ!

ಪರಮಪಾವನಿ ಅವಿರಲ ಶ್ರಾವೀ ನಿರ್ಝರಣೆ,
ಕಾನನಾಂತರ ನಿತ್ಯತರಂಗ ತರಂಗಿಣೀ!

ಭಾರತೋಪಮ ಪುರಾಣೆ ಸ್ವರ್ಗತುಲ್ಯ ಪವಿತ್ರೆ
ಪಶುಪಕ್ಷಿ ಮೋದಿತೆ ಹೆ, ಅಗಣಿತ ಜನ ಪೂಜಿತೆ!

ಎನಿತೆನಿತು ಯುಗಧರ್ಮ ಸಾರಮೋ ನಿನ್ನೊಳಗೆ?
ಶಿವಾನನೆ, ಗಂಗೆ ! ಎತೆನಿತು ಕಲ್ಪದಿಂ ಮಿಗೆ

ಸಮುಲ್ಲಾಸದಿಂ ತೊಳೆಯತಿಹೆ ಪಾಪ ಪಂಕವ?
ನಿನಗಣಂ ಬೇಸರಮಿನಿತಿಲ್ಲ; ಹೇ ವರ ಭಗಿನಿ!

ಆನಂದ ಮೃದು ಮಧುರ ಸಂಗೀತ ಲೋಕವೆ
ನಿತ್ಯ ಧ್ಯಾನದೇಕಾಂತತೆಯ ರಸ ಯೋಗಿನಿಯೆ

ಹೇ ಜನನಿ! ಭಗೀರಥ ವ್ರತ ಸೌಭಾಗ್ಯದಾಯಿನಿ
ಹಿಮಾಲಯ ಸಂಭವೆ ನಮೋ ನಮೋ ಸರಿದ್ವರಾ!

— o —

# ಹೇ ವಾಣಿ, ಗೀರ್ವಾಣಿ!

ಹೇ! ವಾಣಿ, ಗೀರ್ವಾಣಿ! ಅವತರಿಸು ನೀನಿಲ್ಲಿ
ಎನ್ನ ಸುಪ್ತ ಚೇತನವೆಚ್ಚರಿಸು ಕರುಣದಿಂ
ನೀನೆ ಕಿಡಿಯಾಗಿ, ಕುಡಿಯಾಗಿ, ಉದ್ದೀಪಿಸಿ
ಹೃದಯ ದೀಪ್ತಿಯಂ, ಜಡ ಮನಕಲ್ಪವರಳಿಸು.

ನೀನೆ ಚಿರ ಸುಖಾಶ್ರಯ ಸೃಷ್ಟಿ ಸ್ಥಿತಿಲಯಗಳಿಗೆ.
ನೀನೆ ಚಿಚ್ಛಕ್ತಿ ವಿಶ್ವಕೆ, ನೀನುಸಿರ್ ಹವೆಗೆ
ಮೇಣ್ ಶಾಂತಿ ಸತ್ಯ ದರ್ಮ ಜಗಭಾವೋನ್ನತಿಗೆ
ನಿನ್ನುಳಿದ ಬದುಕು ವ್ಯರ್ಥವು; ನೀನೆ ಎನ್ನೆದೆಗೆ

ಚಿರಂತನ ಬೆಳಕು. ನೀ ಮಾಯೆ ಮೋಹ ಶಕ್ತಿಯು
ಮೇಣ್ ಪರಮಾರ್ಥ ಪ್ರೇಮದಲಿ ಭಕ್ತಿ ಮುಕ್ತಿಯು.
ಹೇ ಜನನೀ! ತ್ರೈಭುವನ ತಮೋಹಾರಿಣಿ, ಚಿನ್ಮಯಿ
ನೀನಲ್ಲದಿನ್ನಾರು ತೊಳೆಯಬಲ್ಲರು ತಾಯಿ,

ಈ ಮನವನಾವರಿಸಿದ ಘನಘೋರ ಕತ್ತಲೆಯ?
ಮನ್ನಿಸಿ ಮಮ ಜೀವನ ಉದ್ಧರಿಸು ಅಜಜಾಯೆ!

— o —

# ಚೈತ್ರ ಪ್ರಭಾತ

ಅದೋ ! ಉದಯಮಾನದೈಸಿರಿ ತುಳುಕಿ ಮೂಡಣದಿ
ಚೈತ್ರ ಪ್ರಭಾತದಿಬ್ಬನಿ ಮಿರುಗಿ ತೃಣಗಣದಿ
ಸಾರಿತು ನವೋದಯ ಸುಪ್ರಭಾ ಸಂವಿಧಾನಂ!

ವನಾಂತರದಿ ಪಕ್ಷಿಗೊರಳ್ ಹರಿಸೆ ಸುಸ್ವನಂ
ಮಧುರಗಾನವೀಂಟಿ ಮನ ಮತ್ತಾದುದು ನಿನ್ನ
ನೆನವರಿಕೆಯಲಿ ದೇವ! ಈ ಜನುಮವಳಿವ ಮುನ್ನ
ನಿನ್ನನೊಮ್ಮೆ ಕಾಂಬೆನೊ ಕಾಣೆನೊ ಅರಿಯದಿರ್ಕೆ

ಸಮೆಯದೆನ್ನ ಭಿನ್ನ ತನುಮನಗಳ ದಿದೃಕ್ಷೆ.
ನನ್ನ ಬಯಕೆ ನಿನ್ನ ಮುಳಿಸೆ, ಜಗಜ್ಜೀವನಕೆ
ಇಂತೆನ್ನ ಒಗೆದೆಯೇಕೆ? ಇಂದಲ್ಲದೊಡೆ ಮುಂದೆ
ಕಳೆಯದು ಕಣಾ, ನಿನ್ನ ಹೊಣೆ! ಈ ಜಗದೊಳೊಗೆದ

ಜೀವಿಗೆಲ್ಲ ನೀನಲ್ಲದಿನ್ನಾರ ದರ್ಶನ
ವೇಳ್ಕುಂ? ಉದಯಾಸ್ತ ಪ್ರತಿನಿಧಿಸೆ ನಿನ್ನನೆನೆ
ಕೊಳ್ಳೈ, ಆನಂದಾಶ್ರು ತರ್ಪಣ ಹೆ ಪಗಲಾಣ್ಮ!

— ೦ —

# ಬೂಂದು ಫಲ

ಮಿಡಿಮೊಗ್ಗು ಬಲಿಯೆ ರೇವತಿ ಮಳೆ ಕೃಪೆವೇಳ್ಕುಂ!
ಬೂಂದೂ ಸಮಯ ಸಾಮಾನ್ಯಮೇಂ? ಕವಿಸಮಯದೊಲ್
ಸಮಯೋಚಿತ ಮಹತ್ತರಂ! ಮೇಣ್ ಅಪೂರ್ವಂ!
ಸಾಲು ಸಾಲೆನೆ ಸಾಲೊಡೆದ ಬೂಂದು ತರುನಿಕರ
ಪಚ್ಚವಾರ್ದಿಯೊಲ್ಹಬ್ಬಿದ ಮಹಾ ಸುವಿಸ್ತಾರಂ!
ತಣ್ಪು ಸಿಂಪಡಿಸೆ ಬಹ ತಂಗಾಳಿಯೊಲ್ಮೆಯಿಂ
ಓಲಾಡಿ ಹರ್ಷವಂ ಸೂಸೆ ನೋಡ, ಸುಂದರ
ನೃತ್ಯ ಭಂಗಿಯಂ ! ಸುತ್ತಲು ಚಾಚಿಹ ಹರೆಗೈ
ಕಿರುಗೈಗಳು ಹೂವಿನ ಹಿಲಾಲುಗಳೆನೆ ಸೊಬಗೆ
ಸಮೃದ್ಧ ಕುಸುಮ ಧವಳರಾಗ ಸುಮನೋಹರ
ಮಂದಾಕಿನಿಯಂ ಪ್ರವಹಿಸಿರಲ್, ಭಾವಾತುರದಿ
ನೋಳ್ಪ ಕಂಗಳಿಗೆನಿತು ಆನಂದ ಭಾಗ್ಯಮದು!
ಮೇಣ್ವೊಸಂತ ರಸನೆಯ ಪೀರ್ದು ಬೂಂದು ಫಲಿಸಲ್
ಅಹ! ಪಚ್ಚೆಗಂಬಳಿಗೆ ಕೆಂಪು ಸುರಿದವೊಲ್ ಕಣಾ!

— o —

# ಹೇ ಕರ್ಬೊರ್ನ್ ದಯಾನಿಧಿ!

ಏಸುದಿನಗಳಿಂದೀಸು ತೊಳಲಿ ಬಳಲಿತಾತ್ಮ
ಭವಾಗ್ನಿಯ ಪ್ರೋಚ್ಚಂಡ ಸುಳಿಯಲಿ ಸೆರೆಸಿಲ್ಕಿ!

ಮನಮೆನ್ನ ಬಯಸೆ ನಿನ್ನ ಪಾದಾಬ್ಜ ಧೂಳಿಯ
ನೀನಿತ್ತುದು ಹೊಲ್ಲ ಹೊಣೆಯ ಕೀಳಿನಾ ಕಣೆಯ!

ನಿನ್ನ ಕಾಡಿ ಬೇಡಿ ತಪಂಗೈಯೆ ಕೊಡುವಾಸೆ
ಮೂಡಿಪೇಕೆ ಹಾಳ್ತನಕೆಮ ನೂಂಕಿ ತಡಬಡಿಸೆ!

ಎಂತು ಕಳೆಯಲೆನ್ನಾತ್ಮ ವಿಪ್ಲವ ಪೇಳಯ್ಯ?
ಒರ್ಮೆ ಭಾವ ಮತ್ತೇರಿ ಕಳೆ ಬೀರೆ ಕರುಣೆಯ.

ಇನ್ನೊರ್ಮೆ ಕಾಂಬೆ ದುರ್ವಿಧಿಯ ರೂಪದಿ ಘೋರ
ಕೂರಲುಗನಾಂತು! ಇನ್ನಾದೊಡಂ ದಯೆದೋರಿ

ವಿಶ್ವರೂಪವ ತೊರೆದು ಮರುಗಿ ನೀ ಗುರುತೇಜ
ಸೌಮ್ಯತೆಯಲಿಳಿತಂದು ನೊಂದಿದೀ ಮನಪ್ರಜ್ಞೆ,

ಸಂತೈಸೆ ಅಮೃತಸುಧಾಪೂರ್ಣತ್ವವನೊರೆದು
ಸೊಗಯಿಸ್ಯೆ ಜವದಿ, ಹೇ ಕರ್ಬೊರ್ನ್ ದಯಾನಿಧಿ!

— ೦ —

# ಆರ ಕೇಳಿ ಅರಸಲಿ

ಆರ ಕೇಳಿ ಅರಸಲಿ ನಿನ್ನರಮನೆಯ ದಾರಿ?
ಮಠದಲ್ಲಿ ಗುಡಿಯಲ್ಲಿ ಸಲ್ಲದಿರೆ ಸರಿದಾರಿ
ಬನಗತ್ತಲೆಯಲಿ ಕಾಂಬಾಸೆಯಿಂ ನೆರೆ ನುರ್ಗಿ

ಹಾದಿ ತಪ್ಪಿ ತೊಳಲಿದೆನಯ್ಯ. ಬೇಡಿದವರ್ಗೆ
ತೋರೆಯೇಕೆ ನಿನ್ನ ನಿಸರ್ಗ ಪುಣ್ಯಸ್ಥಲಂ?

ಎನಿತು ತಪಿಸಿದೊಡಂ ಉಸಿರಿಡಿದು ತೊಳಲ್ವೊಡಂ
ಪರಿಪರಿ ಅಳಲ್ವೊಡಂ ಕಾಂಬುದೆ ತವ ನೀಡಂ?

ಏಂ ಗೈಯಲಿ, ಎಂತರಸಲಿ ನೀನೆ ಪೇಳೊಡೆಯ?
ಹೇಸದಿರು ಕೆಸರೆಂದು ಬೇಡುವೆನು ಕಂಡೆಯಾ!

ಕೆಸರಲಿ ಕೆಡೆದ ದಿವ್ಯ ಬಂಧುರತೆಯಾ ಜೊನ್ನ
ಮರಳದೇಂ ಕೊನೆಗೆ ವಿಭು ತಾನಸ್ತಮಿಪ ಮುನ್ನ?

ಕವಿ ಮಾನಸ ಚಿಂತನೆಯಾ ರಥ ತುಡುಕಿ ನಿನ್ನ
ಸೇರದೇಂ ಭೂಪಥ ಕೆಸರೊಳದ್ದಿರೆ ವಿಭಿನ್ನ?

ನೀ ನಡೆಸುವನ್ನ ಸರಿ ನೆಲೆದೋರದೇಂ ಚನ್ನ!

— ೦ —

# ಶೀತಲ ಶಾಂತಿ

ಸಾಯಂಸಮಯದ ಶೀತಲ ಶಾಂತಿ ಭುವನದೈ-
ಸಿರಿಯಲಿ ನಲವಿಂ ಹಬ್ಬಿ ಅಮೃತತ್ವ ಸೊದೆಯೈ
ಎತ್ತೆತ್ತಲು ವೈಶಾಖ ಹೃದಯದ ಪರಿತಾಪಕೆ!
ಶ್ಯಾಮಕಾನನ ತರಂಗ ತತಿಯಲಿ ಸೆರೆಸಿಲ್ಕಿ
ತವಸಿಯನೆ ಒಯ್ಯೊಯ್ಯನೆ ತೀಡುತಿಹನ್ ಕಂತು!
ಬೆಳ್ಮುಗಿಲಲ್ಲಿ ತದಿಗೆ ಪೆರೆ ತೆರೆಮರೆಯಾನಾಡುತ
ಮೌನಧ್ಯಾನದಿ ಮುಗುಳ್ನಗು ಬೀರೆ ಬೆಳದಿಂಗಳ
ಅಮೃತಲೀಲೆ ಪೃಥ್ವಿಯ ಮೇಲೆ ಕೇಳ್ ಮಂಗಳೆ!
ಗಗನ ಸೀಮಾ ಕ್ಷೇತ್ರದಲ್ಲಿ ರಜತ ಪ್ರತಿಮಾ
ವಿಧಾನಂಗೆತ್ತ ಬೆಳ್ಮುಗಿಲ್ ಶಿವ ಶಿವೆಯರಾ
ಚಿತ್ರವಂ ಕಂಡು ತನುಮನ ತೆಕ್ಕನೆ ಪುಳಕಿತಂ!
ಓ ದೇವ ಮೋಡಗಳೆ! ಚಲಿಸದಿರಿ, ಉಜ್ವಲಿತ
ಭಾವ ಸ್ಥಿತವಾಗದ ಮುನ್ನ, ಮಲರಿದ ಭಕ್ತಿ
ಘನಿಸುವ ಮುನ್ನ : ಉದಿತ ಕವಿತೆ ಪ್ರವಹಿಪ ಮುನ್ನ!

— o —

# ನೀಲಗಿರಿ

ಉದಯಮಾನಂ ಅಡರಿ ಬರೆ ಧರ್ಮ ಚಕ್ರದಿಂ
ನವನವೋನ್ಮೇಷಶಾಲಿನೀ ಪ್ರತಿಭಾಧಾರೆ
ಚಿಮ್ಮಿ ನೀಲಗಿರಿ ಪಚ್ಚವಾರ್ಧಿಯಲಿ ಹರಹಿದ
ಮಣಿ ಮಂಜಿನ ಮಿಸು ಸೇಸೆ ಜಗಜಗಿಸಿ ಮಾರ್ಪೊಳೆ
ಶೋಭಾಖನಿ ಕೇಯೂರಂ ! ಅಖಿಲ ವಿಸ್ತಾರಂ!
ಅಣಜಿಯೆನೆ ಸಾಲೊಡೆದ ಹರ್ಮ್ಯಸಿರಿ ಸೌಂದರ್ಯ
ನಿಡು ಗುಂಫಿತ ಪಚ್ಚೆಯೊಳ್ ಮುತ್ತು ಸುರಿದೊಲ್ ಕಣಾ!
ಪೂತ ಸಸ್ಯ ದ್ರುಮ ವರ್ಣಾಂತರಿಸಿ ಕಣ್
ದಿಟ್ಟಿ ದಣಿವೊಲ್ ಸಿಂಗರಿಸೇರಿಸಿ ಘನ ವಿಜಯ
ಧ್ವಜಂ ಮುಗಿಲೆತ್ತರಕೆ! ಸೃಷ್ಟಿ ಶಿಲ್ಪಿಯ ಸುಜಯ
ಪುಲಕಮೇ ಮಲರಿದೊಲ್ ಪೊಣ್ಮಿದ ನಿಸರ್ಗ ಕಲೆ!
ನೀಲಗಿರಿ ಪದಪಾವನಿ ಪಯ್ಕುರ ಜಲರಾಶಿ
ನರ್ಮಶೀಲೆಯೆನೆ ಪುಣ್ಯಶೀತಲ ಪರಿವೇಶಿ!
ಧನ್ಯಂ! ತವ ಮಡಿಲೊಳಿಹ ಸಮಸ್ತ ಮನುಕುಲಂ!

— ೦ —

# ದೇವಕೀದೇವಿ

ಪ್ರಾತಃಸ್ಮರಣೀಯ ಮಹಾಮಾತೆ! ಸುಮಂಗಳೆ;
ಮಹಾಭೂಸುರ ಗರ್ಭ ಸಂಭವೆ; ಸಹನ ಶೀಲೆ;
ವಸುದೇವ ಹೃನ್ನಿವಾಸಿನಿ; ಮಹಾಭಾಗ್ಯವತಿ;
ಭವ್ಯ ಗೀತಾಚಾರ್ಯ ಜನನಿ; ಕೀರ್ತಿಮತಿ;
ಶರಣು ಶರಣೆಂಬೆ ತವ ಚರಣ ಸನ್ನಿಧಾನಕೆ!
ಅಂದು ಖಳ ಕಂಸ ಸೋದರರನ ರೋಷದ ಬೆಂಕೆ
ಧಗಧಗಿಸೆ ದೀರ್ಘಸೆರೆಯಲಿ ನೀ ಪಡೆದ ಕಡು
ಸಂಕಷ್ಟವಂ ಕೃಷ್ಣ ಕೀರ್ತಿಯಲಿ ಕಳೆಕೊಂಡೆ
ಹೇ ದೇವಿ, ಪರಮ ಸಾಧ್ವೀಮಣಿ! ತವ ಜೀವನ
ಪರಿಪಾವನಮಾಯ್ತು, ಪರಮಾತ್ಮನ ಶುಭ ಜನನ
ಮಹೋದಯದಿಂದೆ. ನಿನ್ನಯ ಪ್ರೀತಿಯ ಕಂದನ
ಕೀರ್ತಿಯಾ ಕುಡಿ ಜ್ವಲಿಸುವನ್ನೆಗಂ ಚಿರಂತನ
ನಿನ್ನ ನಾಮಂಕಿತಂ ಲೋಕಲೋಕಾಂತರದಿ!
ಇದೊ ಪುನಃಪುನಃ ನಮ್ರ ನಮನ ದೇವ ಮಾನಿನಿ!

— ೦ —

# ತವ ಕೃಪೆ ಕಣಾ!

ಕಳ್ತಲೆವಸಿರಿಂ ಪೊಣ್ಮಿದುದು ಕುಕ್ಕುಟ ಸ್ವರಂ
ಮತ್ತೆಮೇಣ್ಮತ್ತೆ ಮುಂಬೆಳಕಿನ ಸೂಚನೆ ನೀಡಿ!
ಅನಿತರೊಳೆ ಮಧು ಬೇಂಟೆಯಲ್ತೊಡಗಿ ಜೇನ್ದುಂಬಿ
ಝೇಂಕರಿಸೆ ಗಬ್ಬಿಲಂ ಗೂಡರಸಿ ಸುಳಿದಾಡೆ
ಟಿಟ್ಟಿಭಂ ಹಾರಾಡಿ ಟಿಟ್ಟಿಸಲ್ ಸುಸ್ವರಂ
ಹೊನ್ನೆ ಹುಳ ಮಿಂಚೆ ಮಿರು ಸಹಸ್ರ ಸೊಡರ ಹೋಲಿ!
ಕಣ್ದೀವೆ ನಿಶ್ಚಲಂ; ಹೃದಯ ನರ್ಮಕುಂಡಲಿ
ಮರ್ಮ್ಮಲಂ; ವಿಧಾತನ ಮರ್ಮವಂ ಮನತುಂಬಿ;
ಪ್ರಭಾ ದಿಗ್ವಲಯದಿಂ ಮುಂಬೆಳಕು ನುಣ್ಣಡರಿ.
ತಂಗಾಳಿ ಬೀಸಿ ನಿನ್ನಯ ಕೀರ್ತಿಯ ಕತ್ತುರಿ
ಬಿತ್ತರಿಸೆ ಪರಿಮಳಿಸಿ ದಿಶೆದಿಶೆಗೆ, ಭೂತಲದಿ
ಪಚ್ಚೆಯಲಿ ಸುಖ ಮೂರ್ಛೆಗೆ ಸಂದ ರಸಮತಿಯಲಿ
ಕವಿ ಸಮಯದ ಭಾವಾಗ್ನಿ ಉಜ್ವಲಿಸಿ ನಿನ್ನನು
ನುತಿಸಲೆನೆ ಪರಿದ ಶೈಲಿಯೇ ತವ ಕೃಪೆ ಕಣಾ!

— ೦ —

# ಶ್ರೀ ಗುರುವರ ಬುದ್ಧ

ಭಾರತ ಸಿರಿ ಸಂಜಾತ ಶ್ರೀ ಗುರುವರ ಬುದ್ಧ
ಪರಮ ಧ್ಯಾನಸ್ಥಿತ ಭಗವಂತ ಸುರ ಸಂಬುದ್ಧ !

ನಮ್ರ ನಮನಮಿದೊ ನಿನ್ನಯ ಪ್ರಫುಲ್ಲ ಪಾದಾಬ್ಜ
ಗೌರವ ಸನ್ನಿಧಾನಕೆ ಹೆ, ಅಪೂರ್ವ ಲೋಕಜ್ಞ !

ನಿನ್ನ ಭಾವಾವೇಶದಲೆನಿತು ಮಹರ್ಧಿಕತೆ?
ಅದೇಂ ಧರ್ಮದ ಪೆಂಪೆ? ಗೌರವ ಸಂತುಷ್ಟಿಯತಿ

ಸೊಂಪೆ? ಪ್ರಿಯ ವಚನದಾ ಮಂಗಳವೆ? ಅಹಿಂಸಾ
ತತ್ವದ ಪರಿಪಕ್ವತೆಯ ಸೊಬಗೆ? ಅದಾವ ರಸ

ಸೌಂದರ್ಯವೈ ನಿನ್ನಲಿ ಸುಪ್ರಕಾಶಿಪ ಸ್ಫೀತ
ಖಳಾ ನಿಧಿ? ಏನೆಂದು ಬಣ್ಣಿಸಲಿ ತಥಾಗತ!

ವೈಶಾಖ ಪೂರ್ಣಮಿಯ ರಜನಿಯಾಳ್ದಪನ್ನೈದು
ಡಿಂಡೀರ ಕುಂಡದಲಿ ಮುಂಡಿಸಿದವೋಲ್! ತೆರೆದ

ಸ್ವರ್ಗ ಸ್ವರ್ಣದ್ವಾರದಿ ಕಣ್ಗೆಸೆದ ಪಂಕೇಜ
ಪೀಠಸ್ಥ ಪರಬ್ರಹ್ಮನವೊಲ್ ಹೆ, ಭರತೇಜ!

— o —

# ಸಂತವಿಸು ತಾಯ್ ವನಲಕ್ಷ್ಮಿ!

ಓವೊ! ಕಾಲದೇವಂಗೆ ತಾಳ್ಮೆಯಿನಿತಿಲ್ಲಂ
ಸುಖದುಃಖಗಳೆನಿತಿರೆ ತಾ ಲೆಕ್ಕಿಪನೆ ಅದಂ?

ನೋವು ನಲಿವುಗಳ ಬಳಿ ಇನಿತು ಕಾಲನೂರಂ
ಹಾಹಾ ಎನೆ ಖತಿಮತಿ, ಸಿಗದೆ ಸಂತು ಸಮಯಂ!

ಜೀವನಂ ಇರುವನ್ನ ಕೃತಕೃತ್ಯತೆಯ ಉಸಿರ್
ಸಂಗಳಿಸದಾ ಕಜ್ಜ ಎನಿತಿರ್ದರೇನೊಡೆಯ?

ಲೇಸುಗಾಣದ ಮನಂ ಪೇಸುತಿದೆ ಬದುಕಿನಿಂ.
ಅಕಟೆಮ ಒಗೆದಿರೆ ಗಂಡೆನೆ ಹಕ್ಕಿಯೊಲ್ ಹಾರಿ

ಜಿಂಕೆಯೊಲ್ ಜಿಗಿದು ಖುಷಿಯೈಸಿ ತವ ಬಳಿಸಾರಿ
ಆನಂದದಿಂ ನಿನ್ನ ನಾಮಾವಳಿಯ ಮೆದ್ದು

ಮೈಗರೆಯುತಿರ್ದೆ. ಇಂದಿದೊ ಮತಿಯಣಂಮಿರ್ದು
ಮಾಣೆನಾಂ ನಿನ್ನ ಸೇವೆಯೆನೆ ನೀ ತಿಳಿದತ್ತು!

ಹಾಯ್ ! ಈರಡಿಯ ನರ ಬೊಬ್ಬೆಗಾಂ ಬೇಸತ್ತು
ಓಡಿ ಬಂದಿಹೆ ಸಂತವಿಸು ತಾಯ್ ವನಲಕ್ಷ್ಮಿ

— o —

# ತಾಯಿ ಕಾವೇರಿ

ತಾಯಿ ಕಾವೇರಿ ಕರ್ಣಾಟಕ ಮಣಿ ಮಂಜರಿ!
ಮಂಗಳಾಂಗಿ ಸರ್ವ ಜನೋದ್ಧಾರಿಣಿ ಶುಭಕರಿ!
ಓ ನೀಲನೀಲಾಂಬರಿ ತೀರ ದ್ರುಮ ಪೋಷಿಣಿ;
ಮಾತಾಮಯಿ ಸಕಲಚರಾಚರ ಚಿರಧಾರಿಣಿ;
ತವ ತಪಸ್ಸೋ, ವಿಸ್ತಾರಮೋ, ಗಂಭೀರಮೋ,
ಫೇನರಚನೆಯೋ, ಕರ್ಮಮಯವೋ, ಧರ್ಮವೋ
ಮೇಣೆಲ್ಲವೂ ಅಭಿವ್ಯಕ್ತಿವೆತ್ತ ಅಪೂರ್ವ
ಋಷಿಕಲಾ ಭವ್ಯತೆಯೊ ಏನನೆಂಬೆ ಭ್ರಮಂತ
ಮನ ಮಾಯೆಯೊಳ್ ಸಿಲ್ಕಿ ಮಮ್ಮಲಂ ಜಗ ಮರೆತು!
ಓವೊ! ಚಿಂತೆ ತತ್ತರಿಸಲೇನೆಮ ಅಂತರಾತ್ಮ
ಪರಿದೋಡುತಿದೆ ನೀಲವಾರಿಯಲಿ ತಾ ಬೆರೆತು!
ಏನಚ್ಚರಿ! ಸುಖ ವಿಸ್ಮೃತಿಯ ವಾರಾಗ್ನಿಯಲಿ
ದುರಿತವುರಿದು ಮಿಳ್ಮಿಳಿಸುತಿರಲ್ ಮಲರ್ಗಣ್ಣು
ನಿಂತೆ ನಾನಲ್ಲಿ ಬರಿಯ ಪಂಜರಮೈಸಿ ಕಣ!

— ೦ —

# ವಿದ್ಯಾರಣ್ಯರಿಗೆ

ಕರ್ಣಾಟಕ ಕುವರ ವಿದ್ಯಾರಣ್ಯ ವಿನಯನಂ
ಪರಮ ನಿಗಮ ಧರ್ಮೋದ್ಧಾರಣಾಚಾರ್ಯನಂ
ವೇದವೇದಾಂತಾದಿ ಜ್ಞಾನದೈಸಿರಿಯಣಂ

ಭರದ್ವಾಜ ಗೋತ್ರದ ಶ್ರೀ ಮಾಯಣಾತ್ಮಜಂ
ಯಾಜುಷೀಯ ವರ ವಿಪ್ರಕುಲ ಸಂಜಾತನಂ
ವಂದಿಪೆಂ ಪಿರಿಯ ಭಾರತೋತ್ತಮ ನೇಮದಿಂ.
ಜ್ಞಾನವು ಘನಿತು ಮಾನವೀ ತನುಮನ ಪ್ರಾಣಾಂತು

ಧರ್ಮಮೆ ದಿನಚರಿಯೆನೆ ಕರ್ಮಮೆ ಸಿರಿ ಸಂಪತ್ತು !
ಹೈಂದವ ಧರ್ಮದರಿವಿಂಗೆ ನಿಗಮಾಗಮದ
ಭಾಷ್ಯವೊರೆದ ವರ ಬ್ರಹ್ಮಜ್ಞಾನಿಯೆ ತಾನೈದೆ!
ಕೊಂಕಣದ ತುಡುವೊಕ್ಕ ಶುಷ್ಕ ತುರುಷ್ಕ ಶತ್ರುವ

ಸದೆವೊಯ್ದದ್ಭುತ ಶೌರ್ಯವೇನೆಂಬೆ ಮಾಧವ?
ತಥಾ ಪರಿಶುಭ್ರ ನೀತಿ ಸಂಹಿತೆ! ನಿನಗಿದೋ
ಪರಕೆ ತವಭವಾಲಯಮಿಾ ರಾಜ್ಯ ಬೆಳಗೆ ಚಿರಂ!

— ೦ —

# ಧರ್ಮ

ಹೆ ಕಮನೀಯ ಕಠೋರ ಸಂವಿಧಾಯಕ ಮೂರ್ತಿ
ನಿನ್ನಣಂ ನೆನೆದೊಡಂ ಧಮನಿಧಮನಿಗಳೊತ್ತಿ
ಝುಳಝುಳ ಹರಿವುದು ಕಣಾ, ಬಿಸಿನೆತ್ತರುಕ್ಕುಕ್ಕಿ!
ಹೆ ನಿತ್ಯ ಸಹವಾಸಿ, ಚಿರಾಚರಿತ ತಪಶಕ್ತಿ
ಅದ್ಭುತ ಪ್ರಕೃತಿ ನಿಯಮ ಸೌಂದರ್ಯ ವರಸ್ಫೂರ್ತಿ!
ನಿನ್ನ ರುದ್ರಾಧಿಕಾರಕಳ್ಕಿದ ಶಶಿ ಸೂರ್ಯ
ತಾರಾಳಿ ಗುಡುಗು ಮಳೆ ಮಿಂಚು ಹಿಂಚು ಮುಂಚದೆ
ನಡೆದಿವೆ ತವ ನಿಷ್ಠೆಯ ವಜ್ರ ಬಂಧನದಿಂದೆ!
ಕೆನ್ನಾಲಿಗೆ ಚಾಚಿ ಸುಡುವುದಗ್ನಿ; ಬೀಸುವುದು
ಗಾಳಿ ನಿನ್ನ ನಿಯಮಿತ ಕರ್ಮ ಚಕ್ರದಿ ಸಿಲ್ಕಿ.
ನರಹೀನತೆ ಮೈ ಮುದುಡುತಿದೆ ತವ ಸಂಸ್ಕೃತಿ
ವಾಣಿಯಂ ಕೇಳಿ! ಹೆ ಸರ್ವಧರ್ಮದ ಶಕ್ತಿ
ಸ್ವರೂಪನೆ ! ನಿನ್ನ ಸೇವೆಯೆಮ ಅನುಪಮ ಶಕ್ತಿ;
ನಿನ್ನ ಪೂಜಿಪುದೆ ಮಮ ಜೀವನ ಪರಮಸಿದ್ಧಿ.

— ೦ —

# ಹಿಮಕರಂ

ನಟ್ಟಿರುಳು ನಿಡು ನಿದ್ದೆಯೊಳದ್ದಿ ತಪಸ್ವಿತೆಯೆ
ಮೋನಮೈಸಿದವೊಲ್ ಜಗದಿ ಶಾಂತ ಮಂಗಳಂ!
ಪಾಪದಿಂ ವಿರಮಿಸಿ ಪರಿತಾಪವ ಬದಿಗಿರಿಸಿ
ನಿರ್ವಾಣದಪರೋಕ್ಷಾನುಭವಂ ತನುಗೂಡಿಸಿ
ಪುಣ್ಯವೊಡೆದವೊಲ್ ಜನವಾರ್ಧಿ ಸುಖಮಂಗಳಂ!
ನೀಲಿಮಾರಂಗದಲಿ ಹಿಮಕರನೆಸೆದಿಹ ದಯೆ
ಧರ್ಮದೊಡನೈಸಿ ಸೂಸುವ ಪಾಲ್ಗಡಲೆನೆ ಪರಿ
ಪೂರ್ಣ ಶೈಲಿಯ ಸುವರ್ಣ ಮನೋಹರದಿಂಪಿಂ!
ಅಹಃ! ಏಂ ಶಾಂತಿ ! ಏಂ ಮೌನಸುಖನಿಧಿ! ಸೃಷ್ಟಿಯೆ
ಈ ಪರಿ ಮಮಾತ್ಮಸ್ವಾಂತನೆಗೆ ಅವತರಿಸಿ ಹೃತ್
ಕುಂಡದಲಿ ಮೆಯ್ಗರೆವವೊಲ್ ಜಳಜಳಿಪುದು ಮೃತ್-
ಸತ್-ಚಿತ್ ಕವಿತಾಲಹರಿ ಮಧುರಸ ತಾನಾಗಿ!
ನಿಜ ನನ್ನಿಯವತರಣದಿಂ ತಣಿಯೆ ರಸಮತಿಯು
ದೂರಮೇಂ ಚಿರಪಥಂ ಸಗ್ಗದಾ ಸಿರಿನೆಲೆಗೆ!

— o —

# ಹೆ ಮಿಥ್ಯಾವತಾರಿಣಿ

ಮನಸೆಳೆವೆ ಪಿಂತಿರ್ಕಿ ನಾಗೈವ ಕಜ್ಜಮಂ!
ಹೊಯ್ವಂತೆ ಜಿಹ್ವೆಯಾ ಚಪಲತೆಗೆ ಹೆಜ್ಜೇನ್!

ನೀನೇರದ ಎತ್ತರಮಿಲ್ಲ ನೀ ಹಾರದಾ
ಅಗಲಮಿಲ್ಲ; ಚಿರನೂತನ ಚಂಗತೆಯ ನೆಯ್ದು

ವಿಹರಿಪೆ ಮನೋಮಂದಿರದಿ ಮಹಾ ರಾಣಿಯೆನೆ!
ಜಡಿ ಕುಟ್ಟಿ ಕೆಡವಿ ಕಾಲದೇಶದ ಸೀಮೆಯಂ,

ದಶದಿಕ್ಕುಗಳ ಎಲ್ಲೆಯಂ ದಾಂಟಿ, ಸುಕ್ಕಿದೆದೆ
ಗೋಲ್ಕುಂಡಕೆ ಸ್ವತಂತ್ರ ಶೈಲಿಯಾ ಘನಿತ ಸತ್ಯ

ಸರಿತೆಯಂ ಹರಿಸುವವೊಲ್ ತಳುಕು ತಳಿಪ ಲೀಲೆ!
ಬಡಜೀವನಾಲವಾಲದಲಿ ಕಡು ಮುಗ್ಧತಾ

ಮನುಜತತಿಗೆ ನಿಶ್ವಸಿತೋಚ್ಛ್ವಸಿತವ ಹರಿಸಲ್
ಸರಾಗ ನಿರಂತರ ನೀನಲ್ತೆ ವಾಸಂತಿ?

ಹೆ ವಿಥ್ಯಾವತಾರಿಣಿ! ತವ ಶೀತಲಾಮೃತಂ
ಎನಿತಿರ್ದಡೇಂ ಕಲ್ಪನಾ ಜಗವ ಬಯಸೆ ನಾಂ.

— ೦ —

# ಬಂಕಿಮ ಚಂದ್ರ

ಅಂದು, ಪಾರತಂತ್ರ್ಯದಗ್ನಿ ಕುಂಡದಿ ದೇಶೀಯ
ಜನ ಸಾಂದ್ರತೆ ಚಟಪಟಾಯಮಾನದಿಂ ಬೇಯೆ
ಜಗದ ಕಣ್ಣೆದುರೆ ಕ್ರಿಮಿಕೀಟಕಂ ಕಡೆಗಣ್ಣೆ
ಎಂತು ತವ ನಿಷ್ಠೆ ನಿಲ್ವುದು ಜೀವನದಿ ಪೇಳ್?
ದೀನದಲಿತರನೆಚ್ಚರಿಸೆ ಕಟ್ಟಿ ಕಂಕಣಂ,
ಭಾರತೀಯತ್ವದ ಸಮಗ್ರ ವಿಶ್ಲೇಷಣಾ
ಚಿತ್ತಾರವ ವಂದೇಮಾತರಂ ಗೀತೆಯಲಿ
ಸಂಗೀತಿಸಿ ಅದ್ಭುತ ಚಂಡ ಮಾತೃ ಸ್ವರೂಪ
ತೋರಿಗೊಟ್ಟು ಭುಜಸ್ಫಾಲನೆಗೈದ ಗಂಡುಗಲಿ!
ಭಾರತಿಯ ನಲ್ಮೆಯ ಸಿರಿಸುತ ಬಂಕಿಮ ಚಂದ್ರ
ರಾಜಕೀಯ ಪ್ರಾಚಾರ್ಯ! ಉತ್ಕ್ರಾಂತಿಯ ಚತುರ!
ವರಕಬ್ಬಿಗ! ಅಭಿನವ ವೇದಾಂತ ದುರಂಧರ!
ನಮೋನಮೋ ತಾಯಿಯಿಳೆಯ ಪರಂಜ್ಯೋತಿಯ ಬೆಳಗಿ
ಶಾಶ್ವತವನಾರೈದಾ ತಾಪಸಿ ಹೆ ಬಂಕಿಮಾ!

— ೦ —

# ಎನ್ನ ವಾಣಿಗೆ

ಓ ಎನ್ನಯ ಉತ್ಸುಕ ವಾಣಿ! ಏಕಿಂತತುಲ
ಚಾಪಲ್ಯ ಚಂಚಲತೆ ನಿನಗೆ? ಬರಿದೆಗಳಪಲ್

ಕಾಮಕಾಮಗಳ ಚೋದನೆಯಲ್ತೆ? ಮನಗತಿಗೆ
ಕನ್ನಡಿಯ ಪಿಡಿಯೆ ಕಾಂಬುದು ಕಣಾ ಅಸಹ್ಯಂ!

ವಿಸ್ಮೃತಿ ರಸದೊಳದ್ದಿ ಮನಂ, ಕೀಳ್ಚಪಲತೆಗೆ
ಕಳೆವ ನಿನ್ನ ಗಂಭೀರ ಅಸ್ತಿತ್ವ ಸತ್ಯಂ!

ಜೊಳ್ಳು ಕಂತೆಗಳನೆತ್ತಿ ನುಣ್ನುಡಿಗಳಿಂ ನೀ
ಬಣ್ಣಿಪೆ ಗಳಗಳನೆ ಕಾಣ್ ! ಅದೇಂ ವರ ಚಿನ್ನ

ಪುತ್ಥಳಿಯೆ ಶ್ರಾವಣದ ಕಾಮಧನುವೆ ಸುರಮ್ಯ
ಕಲಾಕೃತಿಯ ಮೇಣ್ ಮಹಾಕಾವ್ಯ ಸಂಭ್ರಮ

ಸರಿತೆಯೆ ಪೇಳ್, ಈ ಪರಿ ಪುಟಿಪುಟಿಯೆ? ಇದಂ
ಲಜ್ಜಾಸ್ಪದಮಲ್ತೆ ನಿನ್ನ ನೀನರಿಯದಿರೆ!

ಆಲಸ್ಯ ಮಾಧುರ್ಯ ಕೈತವಕೆ ಮಣಿಯದಿರ್
ಧಿಕ್ಕರಿಸೆ ಚಾಪಲ್ಯಂ ರುದ್ರ ಮೌನಮೇ ಮದ್ದು!

— ೦ —

# ಜೀವನ ಮಣಿ ಮಂಜರಿ

ಅದೋ ಮೂಡಲರಂಗದಿ ಮಿಂಚಿದ ಮುಂಬೆಳಕು
ಸೀಮಾಂತದ ಹಸುರದ್ರಿಯ ಮೇಲೆ ನಸು ತುಳುಕಿ
ನಾಗಸಂಪಿಗೆ ದತ್ತುರಿ ತಾವರೆ ಕನ್ನೈದಿಲೆ
ಗುಲಾಬಿ ಸುಗಂಧರಾಜ ಕೇಸರಿ ರಾಮಫಲ
ಕಿತ್ತಳೆ ಹಲಸು ಮಾವು ತರತರದ ಪುಷ್ಪಫಲ
ವೇಷ್ಟಿತ ಸುಮನೋಹರ ಕಾನನದಸುರ್ಗಡಲ
ಮೇಲೆ ಪರಿಶುಭ್ರ ಭೋಗ ಮಂದಾಕಿನಿಯಂ
ಪ್ರವಹಿಸುತಿಹುದದೊ ಉಷೆವೆಣ್ಣಿನಾ ರೂಪದಿಂ!
ಇತಿ ಮಲರ್ಗಣ್ಣಂ ಬಿದಿರ್ಚಿ ದೂರ ದಂತುರ
ದಿಗಂತದಲಿ ಸ್ವಯಂಪ್ರಭಾ ಜಾಲವಂ ತೋರಿ
ಬಲ್ಮೆಯಿಂ ಮುಗುಳ್ದಾತ್ಮನಂದನವನಕೈದು
ಜಗವನೆಚ್ಚರಿಸೆ ಬಂದಿಹಳದೊ ದಯಾಸಿಂಧು,
ತೆಕ್ಕನೆ ಮಿಡುಕುವಂತೆ ಸಮಸ್ತ ಮನಃಭೇರಿ!
ನಮೊ ಉಷಾದೇವಿ ನಮೊ ಜೀವನ ಮಣಿಮಂಜರಿ!

— o —

# ಹೇ ತಾಯಿ ಸ್ವಾತಂತ್ರ್ಯ ಭಾರತಿ!

ಹೇ ತಾಯಿ ಸ್ವಾತಂತ್ರ್ಯ ಭಾರತೀ! ನಿನ್ನ ನಿಡು
ಸೆರೆಯ ಶೃಂಖಲೆಗಳಚಿ ಸಂದುವೇಸು ದಿನಗಳ್?

ಸ್ವಾತಂತ್ರ್ಯ ಸಂಗ್ರಾಮದಿಂದ್ರಧನುರ್ವಹ್ನಿಯಲಿ
ಬೇಯೆ, ಸೆರೆಮನೆಯ ಮರುರಂಗದಲಿ ಸೀಯೆ, ಕಡು

ರೋಷಾಗ್ನಿಯಿಂ ಪಟಪಟಾಯಮಾನದಿ ಸಿಡಿದು
ಸಗ್ಗಕ್ಕಡರೆ ಬೆದರಿತೆ ಜನ ಜಂಗುಳಿ? ಅಮಮ!

ಪೆಣ್ಮಣಿಗಳೇಂ ಕಮ್ಮಿಯೆ ಪುರುಷತತಿಗೆ? ಮನೆ
ಮಾರು ಬದಿಗಿಟ್ಟು ನಿನ್ನಯ ಸೇವೆ ಕೆಚ್ಚಿನಿಂ

ಕೈಕೊಳೆ ಎನಿತುತ್ಸಾಹ! ಧೈರ್ಯಸಾಸಂ!
ಅಹಃ, ಕೆನ್ನೀರಿನೋಕುಳಿಯ ನೀರೆನೆ ಚೆಲ್ಲಿ

ಎಸಗಿತಲ್ತೆ ನಿನ್ನಯ ಕಜ್ಜಂ? ತವ ಅನುಪಮ
ಸಹಕಾರದ ಕೂರ್ಮೆಯೊಳ್ ಮುಂಗಾದುಕೊಳ್ಳಲ್

ಸಮಭಾವರಸ ಬಂಧುರತೆ! ಅದೊಡೇಂ ಕನಸು
ಇನ್ನೆಗಂ ಕನಸೆ ಪೆರ್ಚಿ ನರಮತಿ ಕಲ್ಮಶಂ!

— o —

# ದಯಾನಂದ ಸರಸ್ವತಿ

ಸ೯ ಸಾವಿರದೆಂಟ್ನೂರಿಪ್ಪತ್ತನಾಲ್ಕನೇ
ಶಕೆಯಲಿ ಸುಮಂಗಲಿಪ ತಾರೆಯೆನೆ ಸಂಜನಿಸಿ

ಉಜ್ವಲಿಸಿದ ಶಿಶು ಕಾಥಿಯಾವಾಡ ಬ್ರಾಹ್ಮಣ
ಕುಲದಿ ಪೆರ್ಮೈಸಿತೊ ಜನಕೋಟಿಗೆ ನೆರಳೆನೆ!

ಬಾಲಕೋಮಲ ಮೂಲಶಂಕರಂ ಜಾಗರಿಸೆ
ಮಹಾ ಶಿವರಾತ್ರಿಯಲಿ ಶಿವಲಿಂಗದಾ ಮುಂತೆ,

ವಿಶ್ರಮಿಸಲೆನೆ ತಾ ಪೊರಗೈದಿದನಾ ಪಿತಂ;
ಸುಸಮಯೇ ಚಿಣ್ಣ ಮೂಷಿಕಂ ನುಸುಳಿ ಮೆಲ್ಲನೆ

ಶಿವಲಿಂಗದ ಮೇಲ್ಯೆದು ಪೂಗಳಂ ಕೆಡಗಿ
ಸಕ್ಕರೆಯನು ಮೆದ್ದು ತಾ ಪ್ರಥಮಗುರುವೈಸುಗೆ!

ಬಾಲಕನ ಮನಂ ವೇದಾಂತ ಜಿಜ್ಞಾಸೆಯಲಿ
ಮಥಿಸಿ ನೂರ್ಮಡಿ ಧಿಕ್ಕರಿಸಿ ಮೂರ್ತಿ ಪೂಜೆಯಂ

ಪರಿವ್ರಾಜತೆಗೆತ್ತುದ್ಧರಿಸಿದ ಜನತತಿಯಂ!
ಭಕ್ತಿಯಿಂ ನಮಿಪೆ ನಾಂ ಮಹಾ ಜ್ಞಾನವೇತ್ರವಂ!

— o —

# ಕನ್ನಂಬಾಡಿ

ಭೋರ್ಗರೆದು ರಭಸದಿಂ ಮುನ್ನುರ್ಗಿ ನೊರೆಯಾಗಿ

ಮುತ್ತಾಗಿ ಬೊಬ್ಬಿಳಿಸಿ ಬಡಿದಪ್ಪಳಿಸಿ ಬಂಡೆಯಂ ತಾಗಿ
ಮುಂದೆ ಸಾಗೆ ತಪವೆತ್ತ ಕರ್ಮಮಯಂ ಕೊನರಿ

ಸಾಕ್ಷಾತ್ಕರಿಸಿ ಸೃಷ್ಟಿನಿಯಮಕ್ಕೆ ಮಿತ್ತೊ ಎನೆ
ಸಾಗರಿಸೆಮ ಯೋಜನ ಯೋಜನ ಭುವಿ ಸೇಚನೆ

ಗೈದಿಹ ಕಡಲ ಪ್ರಕೃತಿ ಅದ್ಭುತ ವಿಜ್ಞಾನ
ಪ್ರಗತಿ ಪಥದಲ್ಲಿ ಸಾಗಿ ಮಿರುಗುತಿಹುದು ನೋಡಾ!

ನೀರ್ಬಾಗಿಲೆಡೆ ಗೊಂಚಲ ಮಣಿಗಳ ಸೆಳೆಮಿಂಚು
ಪ್ರತಿಫಲಿಸೆ ಹೊಂಬಿಸಿಲ ಮಧುರ ಮಿಲನದ ಸಂಚು!

ವಿಶ್ವೇಶ್ವರ ಧೀಶಕ್ತಿಯ ತಪೋವಹ್ನಿ ಚಿರ
ಶ್ರೇಯಸಿಯ ಪೂರ್ಣ್ಕೆಯಲಿ ಪ್ರವಹಿಸುತಿದೆ ಸುಂದರ

ರಸಿಕವೇಶಿಯ ವೈಖರಿಯಿಂ! ನೋಳ್ಪ ಕಂಗಳ
ಬೆಳಕುಜ್ವಲಿಸೆ ವರವ ಪಡೆಯಿರೊ ದೇವರ್ಕಳಲಿ!

ಶ್ರೀ ಕೃಷ್ಣ ರಾಜರ್ಷಿ ನಾಡಿನ್ನೈಸಿರಿ ಸವಿಯೆ!

— o —

# ಬಗೆ ಸೆರೆ

ಮುಂಗೊಂಡ ಮಂದಮತಿ ನೆಯ್ದು ತನ್ನಯಮನಂ
ಭವ್ಯ ಭವಿತವ್ಯದೇಕತಾನವೊಗೆದ ತೂಣಂ!
ಅಕಟೆಮ ಮತಿಸೆರೆಯ ಬಲಿಷ್ಠತೆಗುಪಮೆಯಿಲ್ಲೈ
ಅಜ್ಞಾನ ತಿಮಿರ ಕರ್ಬುನದೊಲತಿ ಕಠಿಣಮೆನೆ
ತಥಾ ಭೀಷಣ ಚಿರಂತನಂ. ಜಾತಿಮತಗಳ
ಗೀಳು ಮತಿಮಾಂದ್ಯಕಂತು ದಧಿಘೃತಮೆ ದಿಟಂ!
ನೋಡದೊ, ನೆರೆಯೂರಿನ ಜಾತ್ರೆಗೆನೆ ಪೊರವಂಟ
ಮಂದಿ ಕೈಕೂಸು ಸೀಯುತಿರೆ ಬಿರು ಬಿಸಿಲಟ್ಟಿ,
ಲೆಕ್ಕಿಸದೆ ಸಾಗುತಿದೆ ಪರಿದುಡೆಯಲಿ ಸಾಲ್ಗಟ್ಟಿ.
ಮುಡಿಗೇರಿಸಿದ ಪೂವಿನ ಸಿಂಗರ ಬಾಡಿ, ಕಡು
ಕಟ್ಟಳೆಯ ಕುರುಡಿನಲಿ ಬಳಲಿ ಬೆವರಂ ಬಸಿದು,
ರೋಗ ರುಜೆ ಪೋಗಾಡೆ ಕೂಗಿ ಕರೆಯಂ ನೀಡಿ
ಧ್ಯಾನದಿಂದೆ ಕಿವುಡೆನೆ ಆ ದೇವ ದೇವರ್ಕಳ್!
ಈ ಪರಿ ಬಗೆ ಸೆರೆಗಿಂ ಮಿಗಿಲಾವ ಸೆರೆ ಪೇಳ್?

— ೦ —

# ಪೂರ್ಣೇಂದು

ಓವೊ ಪೂರ್ವೀ ಪ್ರಾಂತದ ಸೀಮಾ ಸುಕ್ಷೇತ್ರದಿ
ಮುಂಬೆಳಕು ಚೆಲ್ಲಿ ಮೂಡುತಿಹನದೊ ಪೂರ್ಣೇಂದು!
ಚೈತ್ರ ಚೈತನ್ಯ ಸಿದ್ದಿಗೆ ವಿಶ್ವ ಕಾವ್ಯವಂ
ಕೋದು, ಸ್ಪಷ್ಟ ವ್ಯಕ್ತಿತ್ವದಾಕಾಂಕ್ಷೆಯಿನಿಂ
ಎನೆ ಮೆಲ್ಲ ಮೇಲೆರಿದತ್ತು ಸುರ ತೇಜದಿಂ!
ಅಹ, ಏನದ್ಭುತಂ! ಏಂ ಹೇಮೊಜ್ವಲತೆ ಮೇಣ್
ಸೌಮ್ಯ ಪ್ರೇಮ ಘನವಹ್ನಿ? ಇಂತಪ್ಪ ಮಿಂಚಿನ
ಸುಪ್ರತಿಭಾ ಕಲ್ಪ ಘೂರ್ಣಿಸುತೆ ಕರ್ಮಕಾಂಡದಿ
ಜಗದನಂತತೆಯ ತಬ್ಬಿರೆ ಕಾಲದೇಶಾದಿ
ಮಹಾ ಪರಿಣಾಮ ಕೋಟಿಗಳಲ್ಲಿ ತಾಗೂಡಿ,
ಸದ್ಯಃ ಪ್ರಫುಲ್ಲ ತಾವರೆಯೊಲ್, ಕಡಲ ಮಥನದಿ
ಮೂಡಿಬಹ ಜಲಬುದ್ಬುದದೊಲ್ ಆಶುಕವಿಯಾ
ಮನದಿ ಮಿನುಗುವ ಭಾವಮಂಜರಿಯೊಲ್ ಮಾಯೆ
ಮನಂಗೆತ್ತು ಮಂದೈಸೆ ಎನಿತು ಮಹೋನ್ನತಂ!

— ೦ —

# ಪುತಲೀಬಾಯಿ

ಹೇ ಅರ್ರ್ಯಾಣೆ; ಪುತಲೀಬಾಯಿ ನಾಮಧಾರಿಣೆ!
ಭಾರತಾಂಬೆಯ ಅನುಪಮ ಕುವರಿ; ರಮಣೀಮಣಿ;
ಕ್ಷೇತ್ರಜ್ಞೆ; ಸುಶೀಲೆ; ಪರಮ ಭಕ್ತಿ ಪರಾಯಣೆ;
ಚತುರಮತಿ; ಸತ್ಕುಲ ಪ್ರಸೂತೆ; ವರ ಸಂಸಾರಿಣಿ ;
ನಿನ್ನ ಪಾದ ಪದ್ಮಗಳಿಗಿದೊ ಭಕ್ತಿಯ ನಮನ!

ಭಗವದ್ ಕೃಪೆಯಿಂದಲಿ ನೀನಂದು ವರಮಡದಿ
ಎನಿಸೆ ಶ್ರೀ ಕರಮಚಂದ್ ಗಾಂಧಿಯ ಕೈಪಿಡಿದು
ಚತುರ್ಥ ಸತಿಯೆನೆ, ನಲ್ಮಕ್ಕಳಾ ಮಾತೆಯೆನೆ
ನೀ ಪಡೆದ ಭಾಗ್ಯ ಅಲ್ಪಮೇಂ ಪುಣ್ಯಾಂಗನೆ?

ಕಿರಿಯರ್ಭಕಂ ಮದನ ಮೋಹನನೆನೆ ಪೆಸರಿಸಿ
ರಾಷ್ಟ್ರಕ್ಕಿತ್ತು ಧನ್ಯತೆಯ ಪಡೆದೆ ಸುಪ್ರಜೆಮಾಡಿ!
ಗೃಹಲಕ್ಷ್ಮೀ; ಸುಜನಪೂಜಿತೇ; ವೀರಜನನಿ!
ರಾಷ್ಟ್ರದಾಸ್ಯಮೋಚನೆ ಗೈದ ಪುತ್ರನ ಕೀರುತಿ
ನಿನಗಲ್ತೆ ಪ್ರಥಮ ಕಾಣಿಕೆ ಹೆ ಗಾಂಧೀ ಮಾತೆ!

— ೦ —

# ಸಸ್ಯ ದ್ರುಮ ಸಂಪದಂ

ನಾಗರಿಕ ಪ್ರಜ್ಞೆ ಸ್ವಾರ್ಥ ಕೆಳೆಕೊಳೆ ಎಂಬಹುದು,
ಸರ್ವನಾಶಮೇ ಅಲ್ತೆ ದುರ್ವ್ಯವಹಾರದಿಂ?
ಅತೀವ ಶ್ರಮ ವ್ಯಾಸಂಗ ಸಾಹಸಮೆ ವ್ಯರ್ಥಂ!

ಸುವ್ಯರ್ಥಂ! ಅನುಪಮ ಸೌಭಾಗ್ಯವೆಮ ಸಸ್ಯದ್ರುಮ
ಸಂಪದಂ ಭಾರತೀಯತ್ವಕೆ, ಸಮಗ್ರಮಿಾ

ವೇದೋಪನಿಷತ್ತಿನ ಸಂಸ್ಕೃತವಾಹಿನಿಗೆ
ಎಂದೊಡೆನಿತು ಸಾಜ? ದಂಡಕಾರಣ್ಯ, ದ್ವೈತ-

ವನ, ನೈಮಿಶಾರಣ್ಯ ಎಂದ್ಯಾದಿ ಅಟವಿಗಳ್
ತಾನಲ್ತೆ ಪುರಾಣೇಯ ವೇದ ಕಥನಶ್ರೀಗೆ-

ಘನ ಮಧುರ ಸಂಸ್ಕೃತಿಗೆ ಗಣನೀಯ ತೊಟ್ಟಿಲ್?
ಮೇಣೇ ನವ ಜೀವನ ಸಂಗ್ರಾಮಕೆ ಅದ್ಭುತ

ಆಧಾರಮಲ್ತೆ? ಸೀತಾರಾಮ, ನಳಭೈಮಿಯರು
ಮೇಣ್ಕೃಷ್ಣ ಗೊಲ್ಲರೊಡನೆಲ್ಲಿ ಕೂಡಾಡಿದರೊ

ಅಂಥ ಸಂಪತ್ತಂ ಅಲಕ್ಷಿಸಲಾರಿಗೆ ಮಿತ್ತು?

— o —

# ಸರ್ವಜ್ಞ

ಸಿರಿಗನ್ನಡ ಕತ್ತುರಿಯ ಸೌಭಾಗ್ಯವಿನ್ನೊಮ್ಮೆ
ಮಲರಿ ಮೆರೆಸಲೆನೆ ನೀ ಮರುಚೇತನವೊಡೆಯೈ;

ಕರುನಾಡ ಸಾಹಿತ್ಯದುದ್ಯಾನಂ ಸೊಗಯಿಸುಗೆ
ಚೈತ್ಯವನವೈಸಿ! ಭವತೃಷ್ಣೆಯುಚ್ಛಿನ್ನತೆಗೆ

ನೀ ಪುನರ್ಭವಿಸ್ಸೈ ಕವಿ ಬಂಧು ಹೆ ಸರ್ವಜ್ಞ!
ನಿನ್ನಯ ಛತುರ್ಥ ಶತಮಾನೋತ್ಸವದಾನಂದ

ಪಡುದಿಗಂತದೇಕಾಂತದಿ ಹೊಮ್ಮಿದವೊಲಿಂದು
ಮಿನುಮಿನುಗಿ ಉಜ್ವಲಿಸುತಿವೆ ಕಾಣ್ ತಾರಾಳಿ!

ಹೂಗಂಧ ಹರಡುವಂದದಿ ಬೀಸಿ ತಂಗಾಳಿ
ಚಾಮರಿಸುತಿದೆ ಸಾವಧಾನಿಸ್ಸೈ ಸರ್ವಜ್ಞ !

ನಿನ್ನಾ ನುಡಿಗಟ್ಟಿನ ಸುವಚನದ ಸಿರಿ ಸೊಬಗು
ಆವ ಭಾಷೆಗೆ ಕಿರಿದು? ತ್ರಿಪದಿ ಶೈಲಿಯರಂಗು

ಏನದ್ಭುತಮೊ ತಥಾ ಸಾಜಮಲ್ತೆ ಲೋಕಜ್ಞ?
ತವನಾಮ ಚಿರಂ! ತ್ರಿಪದಿ ಪ್ರವಚನ ಚಿರಂ ಭವದಿ!

— o —

# ಜೀವನ್ಮೃತ್ಯು!

ನರ ಜನುಮಕೆಸೆದುಪಕರಿಸಿದೆಯಾದೊಡೆನ್ನಂ
ಇನ್ನುವರೆ ಲೇಸುಕಾಣೆನೀಸು ಎನಿಸೆ ಮನಂ
ನೋನೋಯದೆ? ಅಂದಿಂದಿನಾ ಹೇರಾಸೆಯಂ
ಎದೆ ಕಂದರದಿ ಅದುಮಿ ಸರಸಿಯೊಲ್ ಕಾವೆನಾಂ
ನೀಜೋಗುಳಿಪೆಯೆಂದು ! ಭವದೀಯ ಗಗನದಲಿ
ಸರ್ವತ್ರ ಗುಡುಗು ಮಿಂಚು ಮಳೆ ಸಿಡಿವ ಮುಗಿಲಲ್ತೆ?
ಪೂರ್ವ ಪುಣ್ಯ ಸಂಗದಿ ಸಂಭವಿಸಿ ಭರತಸಿರಿ-
ವಣ್ಣೆನಲ್ಲಿ ಎಟುಕದೆನೆ ವೇದ ಸಂಸ್ಕೃತಿ ಸಾರ
ಎಂತರಿಯಲಿ ಜೀವನದ ಕಾವ್ಯಸುಧಾಸಾರ?
ಭಾಗ್ಯಭಾನು ಮೂಡುವನೊ ಮೂಡನೊ ಕೊನೆವರಂ,
ಹೇ ಪ್ರಭೋ ! ಕೂಗಿ ಕರೆವುದಿದೊ ಆತ್ಮಶ್ರುತಿ,
ಯಶಸ್ಕರಿಸೆ ಸ್ವತಂತ್ರ ಕಾವ್ಯರಸ ಪೂರ್ಣಮತಿ !
ನೀನಿಚ್ಛಿಸುವೊಡಿಂದೆ ಬರೆಸೊಡೆಯ ಮಾಕಾವ್ಯಂ
ಬೆಂಬಿಡದಲಿ ಕಾದಿಹುದೆನ್ನಂ ಜೀವನ್ಮೃತ್ಯು !

— o —

# ಚೈತ್ರಾನನಂ

ಪ್ರಾಚೀ ದಿಗಂತದ ನಿಡು ನೀಲಿಯ ಲೋಕದಲಿ
ಕಂಗೊಳಿಪುದೊಂದೆ ನಕ್ಷತ್ರ ! ದಿವಿಜರ್ಗೆ ಪ್ರಿಯನೆನೆ

ಕೆಂಗಲಿಪ ಶುಕ್ರನೆನೆ ಉಜ್ವಲಿಪ ಧ್ರುವನೆನೆ
ದೇದೀಪ್ಯಮಾನಂ ಸುರವರ ಸುಮನೋಹರಂ!

ವಜ್ರಶಕ್ತಿಗೆ ದಿವಿಜ ಸಂಸ್ಕೃತಿವೆರಸಿದೊಲ್
ಅಹ, ನೀಲಿಯ ಮೌನದರಮನೆಗೆನಿತು ಭೂಷಣಂ!

ರಂಗವಲ್ಲಿಯ ಶೋಭೆಯಿಾ ಬೆಳ್ಮುಗಿಲಂಗಣ
ಸಿಂಗರಂ, ಇನಿತರೊಳ್ಳೈ ತಹ ಚಾರು ಚಂದ್ರನ

ದಾರಿಗೆ ಕರದೀಪಂ ಬೆಳಗಿತೆನೆ ಝುಳಝುಳನೆ
ಜ್ವಲಿಪ ಚೈತ್ರೋದಯದ ಚೈತ್ರಾನನಂ ಕಾಣ್!

ಸುಗ್ಗಿ ಹಕ್ಕಿಗಳ್ ಇನಿಗೊರಳೆತ್ತಿ ಸಗ್ಗವಂ
ಕೂಗಿ ಕರೆಯೆ ಸಂಧ್ಯಾಗೀತವು ಮೊಳಗಿತು ನವ

ರಾಗಗಳಲಿ! ಮೈನೆತ್ತರು ಮಿಂಚಿನ ಹೊನಲೆನೆ
ಹರಿಸಲ್ ಉದಿಸಿದನದೊ ಮೂಡಣದಿ ರಜನೀಧವ!

— ೦ —

# ವನ ಕಲ್ಯಾಣಿ

ಎನಿತೆನಿತು ಕಾಲಮಾನಂ ಕಳೆದುದೊ ನಿನ್ನಹ
ಮನಗತಿಯಲಿ ಹೇ ನಿತ್ಯ ಶೀತಲ ಗಂಧೆ ! ಬಹು

ಪುಷ್ಪ ಪುಣ್ಯಮಾಲಿನಿ ವರದೇ ವನ ಸುಂದರಿ !
ತಳೋದರಿ ತನ್ವಂಗಿ ತಪಸ್ವಿನಿ ಚಿರತರುಣಿ

ಒಣ ಪತ್ರ ಮಾಲಿನಿ ಪಸುರೊಸರ್ವ ಸ್ವಚ್ಛತರ
ಕೋಮಲಕಿಸಲಯ ವಸ್ತ್ರಧಾರಿಣಿ ವನದೇಹಿ!

ಮುಳ್ಳುಕಂಟಿಯ ಮಹಾ ಬೀಡೆ ! ಘನ ನೀರಂಧ್ರ
ನೀಲನಿಚುಲ ಪರಿವೇಷ್ಟಿತ ಭೀಷಣ ಮನೋಹರೆ !

ವರ ಕರೇಣು ಸೇವಿತೆ, ಉನ್ಮದ ಮಯೂರಗಣ
ವಿಹಾರಿಣಿ; ಕಂಠೀರವ ತರಕ್ಷು ನಿವಾಸಿನಿ;

ಪಶುಪಕ್ಷಿ ಕ್ರಿಮಿಕೀಟ ಸಂಘಟಿತ ಸಮಾಹಿತೆ
ನಿತ್ಯ ನಿರ್ಝರ ಸಲಿಲ ಮಧುರಗಾನಂ ಮೇಣ್

ಪಕ್ಷಿಗಾನಂ ಸಮ್ಮಿಳಿತ ಶ್ರುತಿ ಸಂಭಾವಿತೆ
ಮಂದಾನಿಲ ಮೋದಿನಿ ನಮೋ ವನಕಲ್ಯಾಣಿ !

— o —

# ಅರವಿಂದೊ

ನವಭಾರತ ಘನ ಚಿಚ್ಚೇತನ ಹೆ ಅರವಿಂದೊ !
ಪರಪುಟ್ಟನೊಲ್ ಬೆಳೆಸೆ ತವ ಪಿತಂ ಪಾಶ್ಚಾತ್ಯ
ಶುಷ್ಕ ಸಂಸ್ಕೃತಿ ಕಾನನಾಭೀಲದಲಿ ತಥಾ
ಸ್ವಸಂಸ್ಕೃತಿ ಗಂಧವಿನಿತು ಮುಟ್ಟದವೊಲೆನೆ

ಎಂತಳವು ಪೇಳ್, ನಿನ್ನಯ ವಿಪುಲ ಜ್ಞಾನಧನಯುಕ್ತ
ಮೇಧಾಶಕ್ತಿಗಂ? ಆತ್ಮ ಜ್ಞಾನದಾ
ಬೆಂಕೆಯಂ ಭರಣಿಯೊಳ್ ಮುಚ್ಚಿ ಕೂಡಿಡಲಹುದೆ?
ತಾಯಿಳೆಯ ಕಡು ಬಂಡತನಂ ಕರೆಸೆ ಕಂಬನಿ

ಸ್ವಧರ್ಮೀಯ ಗ್ಲಾನಿ ಬಿಸಿನೆತ್ತರ ಕುದಿಸದೇಂ?
ಸಾಸಿಯೆನೆ ಬ್ರಹ್ಮಕುಠಾರ ರಾಮನಾ
ಅವತಾರಮೇ ನಿನ್ನೊಳೈತಂದು ರಾಷ್ಟ್ರವಂ
ಸ್ವಾತಂತ್ರ್ಯ ಸಂಗ್ರಾಮಕೆ ಛಲದಿ ನೂಂಕಿದನೇಂ?

ಹೆ ವೇದಾಂತ ಖನಿ ! ಜ್ಞಾನ ಜ್ಯೋತಿರ್ಮಣಿ ! ರಸಋಷಿ !
ತವ ನಾಮ ಸ್ಥಿರಂ ಭಾರತ ನಭದಿ ಅರವಿಂದೊ !

— ೦ —

# ನೀನೆನ್ನವನು

ನೀನೆನ್ನವನು ಎಂದು ಕೈಮುಗಿದು ಬೇಡುವೆನು
ಇಂದಿನಿಂ ಕಡೆವರಂ ತಳ್ಳದಿರು ನೀನೆನ್ನ.
ನಾನಿನ್ನು ನಿನ್ನವಳು ಎಂದಿಗೂ ಇಂದಿನಿಂ,
ಬಿಟ್ಟೆನಾ ಭವದಾಸೆಯಂ ನಿನ್ನ ನಿಷ್ಠೆಯಿಂ!
ನಿನ್ನ ನುತಿಪುದೆ ಚೆನ್ನ ; ನಿನ್ನ ಮರೆವುದೆ ಬನ್ನ.
ನೀನೆನ್ನ ಭಾವನ್ನ ; ನಿನ್ನಯ ಕನವೆ ನನ್ನ
ಬಾಳಿನಾಸೆಗೆ ಸೊದೆಯ ಜೊನ್ನ ; ನಿನ್ನ ಸೇವೆಯೆ
ನನ್ನ ಮನದ ಮಧುರ ಕಾಮನೆ; ನೀನು ಉಲಿಸುವೀ
ಕವಿಸೊಲ್ಲು ನಿನ್ನ ಪದಕೆ ತಂದ ಅರಳು ಹೂವು!
ಕಾಡಿ ನಾ ಬೇಡೆ ಒಲಿದು ಮೂಡು ಮನದಿ ದೊರೆಯೆ!
ನನ್ನ ಮೊರೆಗೆ ನಿನ್ನ ಹೊರತು ಸಲ್ಲುವುದೇಂ ರಯೆ?
ನೀನೆ ತಾಯಿ ತಂದೆಯು ನಿನ್ನ ಸುಳಿವ ತಿಳಿವುದೆ
ಎದೆಗೆ ಮಿಂಚು, ಮನಕೆ ಮಿರುಗು, ಬದುಕಿಗೆ ವರವದೆ;
ಭಾವ ಬಲಿತು ಮಿಂಚಿ ಕರುಣೆ ತೋರಲೇನೊಡೆಯ?

— o —

# ಕವಿ ಚಿಂತನೆ

ಮಸ್ತಕ ಗಿರಿ ಕಂದರದಿ ವಿಚಾರ ನದಿಯುಕ್ಕಿ
ಧುಮುಧುಮಿಸಿ ನುಗ್ಗಿ ವರ್ಣವರ್ಣಾಂತರವೆತ್ತು
ಮಳೆಬಿಲ್ಲು ಹೊಳೆಯಪ್ಪಿ ತಾ ಹರಿದವೊಲ್ ಉಕ್ಕಿ !
ಸಿರಿಯೆ ಸಿಂಗರಿಸಿತೆನೆ ಹೊಮ್ಮಳಲ್ ಪಳುಕಿನರೆ

ಬಿಂಗು ಅಭ್ರಕ ತರತರವೆತ್ತು ನವರತ್ನಂ
ಪೇರಿಸಿದ ಹೇರಾಶಿಯೆನೆ ಸುವಿಸ್ತರತರಂ !
ಓವೊ! ವಿಸ್ಮೃತಿಯ ರಸಾತಲದಿ ಪ್ರಾಗೇಯ
ವಿಕ್ಷುರಸ ಪರಿಯೆ ತಾ ಮೀರಿ ಸರ್ವರುತಿಯಂ.

ಭವಭವಗಳಾಚೆಯ ರಸ ಚಿಂತನೆಯಾ ತೃಷ್ಣೆ
ಒಕ್ಕೂಡಿ ಚಿರ ಚೇತನಮೈಸಿ ಪ್ರಾಕೃತ ಕಲೆಗೆ
ಪ್ರತಿಮೆಯೊ ಎನೆ ಘೋರ ತಪದಿಂ ಸಾಕ್ಷಾತ್ಕರಿಸಿ
ಬಿಂದು ಸೊಬಗಿನ ಸ್ವಾರಸ್ಯತಾ ಶೈಲಿಯಲಿ ಮಿಗೆ

ಶಾಂತಿ ರಸನೆಯಾ ಸ್ವಾದನಾಮೋದದಿಂದಲಿ
ಒಡಮೂಡಿ ಸಾರವತ್ತಾದುದು ಕವಿಕಾವ್ಯಂ !

— ೦ —

# ನಾನೇಕೆ ಬಂದೆ?

ನಾನೇಕೆ ಬಂದೆ? ನೀನೇಕೆ ತಂದೆ? ಅದಾವ
ಭಾಗ್ಯಮಿದಕೆ ಕೂಳು? ಭುಮಿಯ ಕಾಂಬುದೆ? ಈ ಭವ
ಬಬ್ಬುಲಿಯ ಮುಳ್ಳ ಮೆಟ್ಟಿ ನಿಲ್ವುದೆ ? ಮೇಣ್ನಿನ್ನ
ಸೇವೆಯವಕಾಶಮೇಂ? ಪೇಳಯ್ಯ ಮನದನ್ನ!

ಇನ್ನೆವರಮೇನೆಂದರಿಯೆನಿಮ ಘನಾರ್ಥಮಂ
ಒಲವೊ ಛಲವೊ ಹಿತವೊ ಅದಾವ ವಾಂಛೆಯಿದಮಮ!
ಇಂತುಟು ಪರಿಕಿಸಲ್ ಭವಕಿಳಿದು ಪೇಳೊಡೆಯ?
ಮೀರಾಬಾಯಿಗೆ ದರುಶನಮಿತ್ತೆ ಸಡಗರದಲಿ.

ಸಕೂಬಾಯಿಯೊಡ ನೀ ಬೀಸಿದೆ ಗಡ ಕಲ್ಲಂ!
ಎನ್ನ ನಾಡಿಸುತಿಹೆ ಮಿಣಿಸುತ್ತಿದೊಲು ಗಾಣಂ!
ನಡು ನೀರೊಳೆನ್ನಂ ಕೈ ಬಿಡೆ ಆರುದ್ಧರಿಪರೈ ?
ತರವಲ್ಲಿದು ಸ್ವಾಮಿ ತರಳೆಯೆಂದು ಕೃಪೆದೋರು!

ನಿನ್ನ ಭಕ್ತರಂತೆ ಬಗೆಬಗೆಯಿಂ ನುತಿಸಲರಿಯೆ
ಶಿಶು ಗತಿಯಲಿ ತೊದಲುತ ಮುಗುಳ್ದಲಿವೆನು ಜೀಯ!

— ೦ —

# ಶ್ರೀಹಲಸು

ಹಚ್ಚನೆಯ ಹೆಮ್ಮರ ನಿಡು ಪಚ್ಚೆಯೊಲೆಸೆದುದ್ದೈ
ಕಣ್ತೆರೆದು ನೋಳ್ಪ ದಿವ್ಯದರ್ಶಕರಿಂಗೆ ತಾಂ !
ಅದೊ, ಎಲೆಎಲೆಗಳಲಿ ಮಲರಾಡೆ ಮೆಲುಮೆಲ್ಲನೆ
ಮರ್ಮರಿಸಿ ತಲೆದೂಗುತಿಹುದು ಪಲ್ಲವ ಪಾಣಿ !
ಅಹ, ಏಂ ಫಲ ವೈಭವ ! ವೃಕ್ಷದೇವನಾ ಕೃಪೆ
ಕಿರಿದಲ್ಲ ಕಣ್ಮನಗಳ ಸೆಳೆಯುವ ಮಹಾ ಕೃಪೆ !
ಶತ ಸಹಸ್ರ ಮುಳ್ಮಣೆಗಳ ಹೊಂದಿಸಿ ಅಂದದಿ
ಸರಿನೆಟ್ಟು ಮೇಲೆ ಪಚ್ಚವರ್ಣವ ತಾಂ ಕೋದು
ಒಳಾಂತರದಿ ಸುವರ್ಣ ಮೃದು ಮಧುರಮಯಮಾದ
ತೊಳೆಗಳಂ ಸಮೃದ್ಧಿಯಲಿ ಕೂಡಿಹ ವಿರಂಚಿ;
ಸಕ್ಕರೆ ನಿಧಿಯೊಲ್ ಸರುವರಿಗಕ್ಕರೆಯ ಹಂಚಿ !
ಬಹು ಸಂಖ್ಯೆ ಬಹುಗಾತ್ರದ ಬಹು ಜನ ಸೇವಿಪ
ಫಲಮೈಸೆ ವಂಸಂತನೊಲ್ ಹಿರಿತನದಿ ಮಾನಿಪ
ಬಡಜನ ಸುಲಭ-ಮಕ್ಕಳೊಲ್ಮೆಯಾ ಶ್ರೀಹಲಸು !

— o —

## ಗುರುದೇವನಿಗೆ

ಅಲ್ಪಧ್ಯಾನದ ಕಲ್ಪನಾ ನಾವೆಯಲಿ ತೇಲಿ
ನಾನೈದಿಹೆ ನಿಮ್ಮ ಪದತಲಕೆ ಹೇ ಗುರುದೇವ!

ಶತಮಾನ ಸಂಧ್ಯೆಯೀ ಪಾವಟಿಗೆಗಳನಿಳಿದು
ದಕ್ಷಿಣೇಶ್ವರದ ಶ್ರೀ ಭವಾನೀ ಆಲಯದಿ

ತವ ಜ್ಞಾನ-ಪ್ರಜ್ಞಾನ ಪೂತ ಸಾನ್ನಿಧ್ಯದಲಿ
ನಾನಿಂದಿಹೆ ಪ್ರಾಂಜಲಿಯಪ್ಪಿ ಹೇ ಗುರುದೇವ!

ನಿನ್ನ ದಯದಿಂದಲೆಮ ಪಾಪಪುಣ್ಯ ಕುಟಿಲತೆ
ಉರಿದುರಿದು ಅರೆಚಣದಿ ಭಸ್ಮವಾಗಲಿ ಗುರುವೆ!

ತವ ಸಚ್ಚಿದಾನಂದ ಕೃಪೆ ದೊರೆಕೊಡಲೆನಗೆ
ಭವಾನಿಯನುಗ್ರಹಂ ರಂಜಿಸಲ್ ಹೃದಯಗವಿ.

ಭಾವರಸ ತೀರ್ಥದಿ ಮುಳುಗಿ ನೆರೆ ಮಧುವೀಂಟದೆ
ಮಲರದು ಮನಮಲ್ಲಿಗೆ ; ಅಳಿಯದು ಮತಿಹೀನತೆ.

ನಿನ್ನನೊಲಿಪುದೆ ಭಕ್ತಿ ; ನಿನ್ನ ಕೈಂಕರ್ಯವದೆ
ಮುಕ್ತಿ, ಆಲಿಸಯ್ಯಾ, ಎನ್ನಯ ಮನವಿಯಾ!

—o—

# ಮೋನಮಿರು ಮನವೆ

ಸನ್ನಿವೇಶದ ಗುಟ್ಟರಿತು ಮೋನಮಿರು ಮನವೆ!
ಸುಮ್ಮನೆಲ್ಲೂ ಹಾಳು ಹಣಾಹಣೆ ಬೆಳೆಸದಿರು.
ಬಾಳ್ ಬನದ ನೋಂಪಿಗೆ ಬಲಿಯಾಗದೆಚ್ಚರಿರು!
ಮಾತೆ ಮಿತ್ತು ಶಾಂತಿಗೆ ಮೌನವೆ ದಾರಿ ಜೀವನ-
ದುದ್ದೀಪನೆಗೆ, ನಿದ್ದೆ ಸೊಗಮೆನೆ ಮರಣ ಲೇಸು!
ಹೊಲ್ಲ ಮಂದಿಯಲಿ ವಾದ ಸಲ್ಲ. ಮತಿಹೀನರ
ನೇಹ ಸಲ್ಲ. ಹದಮಿರೆ ಹೆಜ್ಜೆಯಲಿ ಭಾವಮಿರೆ
ಚಿತ್ತದಲಿ ನೀನಹುದು ಕಲಿಯುಗದ ಸಿರಿಮಲ್ಲ!
ಒಳ್ಳಿತೆಂಬರೊಡನೆ ಅಹುದೊಳ್ಳಿತು ಎನಬೇಕು;
ಕೆಟ್ಟಿತೆಂಬರೊಡನೆ ಸರಿಸರಿ ಎನುತಿರಬೇಕು;
ಅದು ಇದರೊಡನೆ ಆತ್ಮನುದ್ಧರಣ ಅತಿ ಲೇಸು!
ಪವನ ಮಾರ್ಗದಿ ನಿತ್ಯ ಪುಣ್ಯಯಾತ್ರಿಸಲೈಸೆ
ಭಾವನೋಜ್ವಲ ಚೈತ್ರ ಪುಲ್ಲ ಕಾವ್ಯಕಾನನ
ಸರ್ವೋತ್ತಮವೆಂಬೆ ತವ ಕಲ್ಯಾಣಕೆ ಕಾಣ್!

— o —

# ಇಪ್ಪತ್ತೇಳರ ಹೊಸ್ತಿಲಿನಲಿ

ಓವೋ! ಎನಿತು ವರುಷಗಳ್ ಸಂದುವು ಸ್ವಾತಂತ್ರ್ಯ
ಸಂಗ್ರಾಮದಿ ಜಯಕೇತನ ಪೆರ್ಮೆಯೊಳ್ ಪೊಂದಿ?
ಅಂದೇನು ಉತ್ಸಾಹಮೀ ಜಗದಿ! ಗಣತಂತ್ರ
ಇಪ್ಪತ್ತೇಳರ ಹೊಸ್ತಿಲಂ ದಾಂಟೆ ಎನಿತಂದ!
ಪಂಚಶೀಲಂ ನಡೆದಿದೆ ಸಂಯೋಜನೆಯೈಸಿ
ಆದೊಡೇಂ, ದೀನದಲಿತರ ಸಂಕಟ ನೀಗಿಪ
ವಿಧಾನಂ ಸಂದುದಿಲ್ಲ! ಇಲಿಪೆರ್ಗಣ ಗುಂಪು
ಬೊಕ್ಕಸಂ ಪಿರಿದುಂಡು ತೇಗೆ, ನಿಜ ದೇಶೀಯ
ನೇಮದಲೆನಿತು ವಿಶ್ವಪರ್ಯಟನೆ ಸುವಿಸ್ಮಯ
ಗೊಳಿಪಂತೆ! ಮೇಣ್ ಬರುಹೋಗತಿಥಿ ಅತಿಥೇಯ
ಗೋಷ್ಠಿಯೇಂ ಕಮ್ಮಿಯೇ? ಆಡಂಬರ ಜೀವನ
ಸಂಭ್ರಮದ ದುರ್ವೆಚ್ಚಂ ಹುಟ್ಟುವಳಿಗನ್ಯ
ಮಿತ್ತಲ್ತೆ? ದಾರಿದ್ರ್ಯ ನಿರ್ಮೂಲನ ಅತೀವ
ಕಷ್ಟಸಾಧ್ಯವೈ ವಿಚಕ್ಷಣೆಗಣ್ ತೆರೆಯದಿರೆ!

— o —

# ಹೆ ಭಾರತ ಕವಿ ಕೋಗಿಲೆ !

Nightingale of India ! ಎಂದುಚ್ಚರಿಸೆ
ಪೆರ್ಮೆ ಮಾತ್ರಮೇಂ ? ನವಿರು ನಿಮಿರಿ ಬಿಸಿಗೊಳ್ವುದೊ
ತಣ್ಣೆತ್ತರ್ ! ನೀ ತುಳಿದ ದಿಟ್ಟ ಪಥವನರಸೆ
ನೂಂಕುವುದು ಶಿರವೊತ್ತಿ ! ಎಲೆಲೆ, ಕವಿ ಕೋಗಿಲೆ !
ಏಂ ವಿಪುಲ ಜ್ಞಾನ ? ಏಂ ಧೀಶಕ್ತಿ ? ಏಂ ಕಾವ್ಯ
ಖಡ್ಗ ಚಾಲನೆ ? ಮೇಣ್ ರಾಜಕಾರಣ ಮಾನ್ಯೆ !
ಆವ ಜನ್ಮದ ಗುಣ ಕೆಳೆಕೊಂಡ್ಯೆ ? ಪ್ರಾಚೀನ
ಋಷಿಗಳೊರವೊ ಅರ್ವಾಚೀನ ಬುದ್ಧರರಕೆಯೊ
ಮಾಕಾಳಿಯವತರಣವೊ ಅದಾವ ಶಕ್ತಿಯೈ
ದುರ್ವಿಧಿಯನೆಚ್ಚರಿಸೆ ನಾಗ ಸರ್ಪಿಣಿಯೈಸಿ !
" Oh ! fate in vain hanker to control
My trail serene, indomitabel soul"
ಎನುವೊಡೆ ಕೆಚ್ಚಿನಿಂ ಮತ್ತಾರಿಗಿಂತಳವು
ಹೆ ಭಾರತ ಕವಿ ಕೋಗಿಲೆ ಸರೋಜಿನೀ ದೇವಿ !

— ೦ —

# ಪೂಗೀ ಫಲಂ

ಮುಂದಡಿ ಇಡಲೊಸಂತ ಶಿಶಿರನಂ ಹಿಂದೊತ್ತಿ
ಪೂಗೀ ಫಲಂ ಬಲಿಯಿತು ಮಾಗಿಯ ಹಿಮವೊತ್ತಿ !
ಹೊಂಗಲಿಪ ಸುಡು ಬಿಸಿಲೆನೆ ಕರಿಮುರಿ ಬೇಯತಲಿ
ಹಸುರುದುರಿ ಕೋಮಲ ಕಿಸಲಯ ಕೊನರಿತು ಕನಲಿ !
ಪಾಲ್ಗುಣನ ಮಸ್ತಕದಿ ಮಣಿಮುಕುಟ ಮಿನುಗಿದೊಲೆ
ರವಿಛವಿ ಪ್ರತಿಫಲಿಪ ತೃಣಗಣ ಹಿಮಮಣಿ ಲೀಲೆ !
ಬನದಿ ಬೀಸಿ ಮರ್ಮರ ಶ್ರುತಿಗೈವ ತಂಗಾಳಿ,
ಶಿಶಿರತೇಜದಿಂದೆ ಪಕ್ಷಿಗಳುಲಿಯೆ ಮುದತಾಳಿ !
ನದ ನದಿಗಳ ಫೇನರಚನಾ ಸಂಭ್ರಮ ಕಲೆ
ಪೂತ ಚೂತ - ಸಸ್ಯದ್ರುಮ ಸುಗಂಧ ಸೌರಭಕಲೆ
ವಸಂತನೊಳಗೊ ಸರ್ವತ್ರ ಚೇತರಸನೆಯೊಳಗೆ
ವಸಂತನೊ ಕಾಣೆ ! ಪೂವರಳಿ ಮಿಡಿ ಪಣ್ಣಾಗಿ
ಪೂಗೀ ತರು ಪುಂಗವ ಫಲಭಾರದಲಿ ತೂಗಿ
ಕಾವ್ಯ ಲಹರಿಗೆ ಬಿಂದು ತಾನೈಸಿಹ ಸಿರಿ ವಲಂ !

— o —

# ಸರಸ್ವತಿಗೆ

ಹೆ ಸರಸ್ವತಿ ನೀ ಮೈಗರೆಯೆ ಏನಿದೆನ್ನಲಿ ?
ಕೊಳಕಿಗೆ ಸರಿ ಹಂದರವೀ ಮಾಂಸ ಮಜ್ಜಾಲಿ !
ನಿಜ ರಂಜನೆಯಿಲ್ಲದೆ ಹೇಸಿ ಮುದುಡಿತು ಪ್ರಾಣ
ಇನ್ನಾರು ಗತಿಯೆನಗೆ ಹೆ ವಿದ್ಯಾ ಮಾಧುರಿಯೆ !
ವೇದ ಶಾಸ್ತ್ರಗಳನರಿಯೆ ಪುರಾಣ ಪರಿಪುಣ್ಯ
ಕಥನವನು ಕೇಳರಿಯೆ ಎಂತು ಭಜಿಸಲಿ ನಿನ್ನ ?
ದುಃಖ ದುಗುಡವು ಕಾಡುತಿರೆ ಕೊರೆದೊಡಲ ಶುಕ್ತಿ
ಶಿರವೆರಗಿ ನಿನ್ನಡಿಗೆ ಮಾಳ್ಪೆ ಬಿನ್ನಹ ಭಕ್ತಿ.
ಹೇ ದೇವಿ ! ಅಜನರಾಣಿ; ಅಕ್ಷರ ನಿರೂಪಿಣಿ;
ಪರಿ ಪಾಲಿಸೌ ನಿತ್ಯ ನಿರಂತರ ಕೈಬಿಡದೆನ್ನ.
ಗಿಳಿಯ ಪಂಜರದೊಳಿಟ್ಟು ಪೋಷಿಸಿ ಒಳ್ನುಡಿಯ
ಕಲಿಪಂದದಲಿ ನೀನೆನಗೆ ಕಲಿಸಲ್ ನಿನ್ನಯ
ಕೀರ್ತಿಯೆನ್ನ ಜಿಹ್ವೆಯಲಿ ಪುಟಿಪುಟಿವುದೌ ಜನನಿ !
ನೇಮಿಸೆನ್ನ ತವ ಚರಣ ಸೇವೆಗೆ ಕರುಣೆಯಿಂ.

— o —

# ನೈದಿಲೆ

ಥಳಥಳಿಪ ಭೀಷ್ಮಕಾಂತ ಬೃಹದ್ ಪುಷ್ಕರಣಿ!
ಪ್ರಫುಲ್ಲ ಪದ್ಮಿನಿ ಮರಾಲಿಕಾ ಪುಂಜಿನೀ!
ಸಸ್ಯಾಳಿ ಜೀವಾಳಿ ರಂಜಿಪ ಮನ ಮೋಹಿನಿ!

ಶರದಿಯೆನೆ ಸುವಿಸ್ತರ ಹಬ್ಬಿ ಶಾಂತ ಮಂಗಳ
ಶೋಭೆಯಿಂ ಸಕಲ ಜೀವಕೋಟಿಯನಾದರಿಪ
ಸಮೃದ್ಧ ಸರ್ವೋಚ್ಚ ಕೆನ್ನೀಲ ಜಲರಾಶಿ!
ಕೆಸರೊತ್ತಿ ಮೃಣಾಲ ತಿರುಗಿ ಸುತ್ತಿ ಮೇಲೈಸಿ

ಜಲ ಪೀಠದಲ್ಲಿ ಪಚ್ಚ ಪತ್ರಾಸನ ನಿರ್ಮಿರ್ಚಿ,
ಪೀಠವೇರಿ ಮೊಗ್ಗು ಮಲರಿ ಸೌಂದರ್ಯ ಧರ್ಮಂ
ಜಗದ ಕಣ್ಮನ ಸೆಳೆವುದು 'ನೈದಿಲೆ' ನಾಮದಿಂ!
ಜಲದಂಚಿಗೆ ಪಚ್ಚೆಯ ಕೋದು ಅಂದದಿ ಕೆಂಪು-

ಬಿಳುಪು ಕಿಡಿಗಳ ಜೋಡಿಸಿ ಸಿಂಗರಿಸಿದಂತಕ್ಕು!
ಸ್ವರ್ಣ ರೇಣುತಲದಲಿ ರಜತ ಮಧುಕರಂಡಂ
ಇಂದಿಂದಿರ ಶೋಭಾ ಮನೋಲ್ಲಾಸಕಾರಂ!

— o —

# ಮಹಾತ್ಮನಿಗೆ

ನೋವು ನಲಿವುಗಳೊಂದೆನೆ ಸವಿದಿರೆ ಜಡಮಂದಿ
ಪಾರತಂತ್ರ್ಯದಶ್ರು ಕಡಲೊಳೀಸಿ! ತಾನಂದು
ಭಾರತದ ಸ್ವತಂತ್ರ ಕಹಳೆಯೂದಿ ಧ್ವಾನದಿಂ
ಕರೆ ನೀಡೆ ದಶದಿಶೆಯ ಜಡನಿದ್ರೆ ಪರಿವಂತೆ
ಸ್ವಾತಂತ್ರ್ಯ ಗೀತೆ ಮೊಳಗಿ ಸೋಹೆ ಚರಾಚರಕೆ!
ಸತ್ಯಾಗ್ರೆಹ ಸಂಗ್ರಾಮ ಅತ್ಯದ್ಭುತ ಕೀರ್ತಿ-
ಕೇತನವ ಹಾರಿಸಿತೊ ಎತ್ತಿ ಮುಗಿಲೆತ್ತರಕೆ!
ಬಡವರೊಳ್ ಬಡವ ಧೀರರೊಳ್ ಧೀರ ಎಂಬೆನೆ
ಋಷಿಗಳಲ್ಲಿ ನೀ ಸರ್ವಜ್ಞ ಋಷಿಯೇ ಸರಿ ಕಾಣ್!
ದೇಶೀಯರುದ್ಧರಣಮೆ ನಿನ್ನಯ ಮನವಾರ್ತೆ,
ವರ್ಣಭೇದವನಳಿಸಿ ಖಿಲಮಂದಿ ಮೇಲೆತ್ತಿ
ಮಧುಪಾನವ ನಿರೋಧಿಸಿದ ನೀ ಪರಮ ಸಾಸಿ
ಹೆ, ಸಾರ್ಥಕ ವರೇಣ್ಯನೆ ನೀನಹುದು ಮಹಾತ್ಮ!

— ೦ —

# ಶಿರೋಮಣಿ

ಪಚ್ಚ ರಾಜಿಯ ಸುಂದರ ಗದ್ದುಗೆಯೆನೆ ದೂರ
ದಂತುರದ್ರಿಯನೇರ್ದ ಉಜ್ವಲೋಜ್ವಲ ದಿನಕರ!
ಸುರ ತೇಜದ ನಿಪ್ಪಟ ದೀಧಿತಿಯ ಮನದಣಿಯೆ

ನೋಡ! ಏನದ್ಭುತಮೊ ತಳತಳಾಯಮಾನಮಿಾ
ಸೌಂದರ್ಯ ಮಂಡಲಮಮ. ನಿತ್ಯಂ ದೃಗ್ವಿಷಯ

ಮಾದೊಡೇಂ? ಅರ್ಥೈಸಲೆಣೆಯಿಲ್ಲದತಿ ಗೂಢಮಿಾ
ಘನತರಂ! ಅಹಃ ಚೈತ್ರೋದಯದ ಲಲ್ಲೆಯೋ

ಮಹಾ ಪ್ರಸ್ಥಾನದೇಕಾಂತದೈಸಿರಿಯೋ
ಆದಿಶಕ್ತಿ ವಿಕೇಂದ್ರೀಕರಣಮೋ ಆಪನಿತು

ನೋಡ! ಕಾಲಾಂತರದ ಕನ್ನಡಿಯಿಂದಿನಿತು
ಜವನಿಕೆಯ ಪರಿಕಿಸು; ಇಹಪರ ಮಧ್ಯೆ ಶೋಭಿತ

ದೇವ ಮಾಣಿಕ್ಯಮಿಾ ವರ ನಿಸ್ತುಲ ಕಾಂತಿಯಿೂ
ಮಹದಶಕ್ಯಮಿಾ ಗಂಭೀರ ಸಂಬುದ್ಧವೀ

ಉಜ್ವಲೋಜ್ವಲ ವೃತ್ತವೀ ಪರಮ ಶಿರೋಮಣಿ!

— ೦ —

# ನರೇನ್ ಬೈರಾಗಿ

ಎಲ್ಲೆಲ್ಲಲೆಯುತಿಹೆ ಎನ್ನ ಮೂರ್ಖ ಮನಸಾ!
ಸಾಕಿನ್ನು ಹೀನ ಭೇಟ ಹೆ ಚಂಚಲ ಮನಸಾ!

ಕನ್ಯಾಕುಮಾರಿಯುಡಿಯೆಡೆಗಿನಿತು ಮತಿಯಣಂ
ಹೊರಳಿಸಾ! ಅಹ, ಶಮದಮಿಯ ಪ್ರಶಾಂತ ಭಾವಂ

ಅತ್ಯಂತ ಸುಶಾಂತ ನೋಂಪಿಯಿಂ ಸಾರುತಿರ್ಪುದು
ಘೋರ ಭವಧಿಯಂ ದಾಂಟಿ ತಾ ಗೈದ ತಪವಂ!

ದಿವ್ಯ ಮಾತೃಸಂಸ್ಕೃತಿಯಾಧ್ಯಾತ್ಮ ಕ್ಷೇತ್ರದ
ಚಿನ್ಮಯರ ಪಿಂತಿರ್ಕಿ ಬಹು ಕೀರ್ತಿಯಂ ಪಡೆದ

ಮೂರ್ತಿಮತಿ ಧ್ಯಾನ ಸ್ಥಿಮಿತ ವಿವೇಕಾನಂದ!
ಜ್ಯೋತಿರ್ವಕ್ಷದಮೃತವ ಸೂಸಿ, ದಯನೀಯ

ಕರುಳ ಕರೆಯಂ ಕೇಸರ ಕಂಠದಿ ಹೊರಚೆಲ್ಲಿ
ಜಡ ನಿದ್ರಿತರನೆಬ್ಬಿಸಿ ಪರಿಪೂರ್ಣದೆಡೆಯಂ

ತೋರ್ದವರ ನೃಸಿಂಗಹೋಗ್ರ ನರೇನ್ ಬೈರಾಗಿ
ಭಾರತತ್ವಕೆ ಅವತರಿಸಿದನ್ನೆ ಶಿಶುವಾಗಿ!

— ೦ —

# ಭೋರಿಟ್ಟು ಮಳೆಹೊಯ್ದು

ಭೋರಿಟ್ಟು ಮಳೆಹೊಯ್ದು ಭೂತಲದಿ ನಳನಳಿಸೆ
ಎಳೆ ಹಸುರು, ಕಾಲದರ್ಪಣದಿಂ ಪ್ರತಿಬಿಂಬಿಸಿ

ಜವನಿಕೆಯ ಸೊಂಪು ಮಾನಸ ಪೆಂಪಿಗಿನಿತಿಂಪು;
ಹೂಗಾಳಿಯಲಿ ಮಾರ್ಮಲೆವ ತಳಿರಿನ ಅಲಂಪು;

ಮಲರ್ದ ಕುಸುಮ ಸುಗಂಪು; ತ್ರಿಪಕ್ಷದಾ ಘನತೆ
ಕಕ್ಷೆಗೆತ್ತು ಎದೆಗವಿಯಂ ತೂರೆ ಮಮತನತೆ

ಮುಂಗಾರಿನುಬ್ಬರಕೆ ಸಿಲುಕಿ ತರಗೆಲೆ ಕಣಾ!
ಚಂದ್ರ ಚಂದ್ರಿಕೆ ನಸುಜ್ವಲಿಸೆ ಬೆಳಗಿ ಮೂಡಣಂ

ಜೀರ್ದುಂಬಿ ಜೀರಿಡುತ ನಲವಿಂದೆ ಸ್ವಾಗತಿಸೆ,
ನಿಶಾಚರರ್ ಮುದದಿಂ ಪಾಡಿ ಉದಯೋತ್ಸವಿಸೆ

ವಿಸ್ಮೃತಿಯ ವೈತರಣಿಯಲಿ ಜಗ ಜಡೀಯತೆ
ಕೊಚ್ಚಿಪೋದುದೈ ರಸ ಭಾವಾವೇಶಂವೆತ್ತು!

ಮೆಲ್ಲ ಮಲರುತಿದೆ ಮೃಗಶಿರ ರಾಶಿ ಕಾಣೆಯಾ!
ಇನ್ನೇಂಬಹ ಪೂರ್ಣೇಂದುವಿಗೆ ನೀ ಕೈಮುಗಿಯಾ!

— ೦ —

# ಸ್ವರೂಪರಾಣಿ

ಪವಿತ್ರ ಭಾರತಾತ್ಮಜೆ; ಶುಭ್ರ ಮಾನಸಮಂದಿರೆ;
ಶ್ರೀಮತಿ ಸ್ವರೂಪರಾಣಿ ನಾಮಾಂಕಿತ ನೀರೆ;
ಸದ್ವಂಶ ಸಂಭವೆ; ವರ ಬ್ರಾಹ್ಮಣೆ; ಶುಭಾಂಗಿನಿ;
ಪೂಜ್ಯ ಜನನಿ; ಭಗವದ್ ಕಾರುಣ್ಯ ಸ್ವರೂಪಿಣಿ;
ಅಸಂಖ್ಯ ಹೃದಯ ಮಾನಿನಿ; ನೆಹರೂ ಕುಲಧವಳೆ;
ಕಲಿಲೀಲಾ ಯಶೋಲಕ್ಷ್ಮಿ; ಲಜ್ಜಾಶೀಲೆ;
ವಿನಯ ಸಂಪನ್ನೆ ನಿನಗಿದೊ ನಮ್ರ ವಂದನಾ!
ಎನಿತೆನಿತು ಜನ್ಮ ಪುಣ್ಯಫಲವೈ ತವ ಜನನ?
ಮೇಣೆನಿತು ದೀನದಲಿತರ ಅಶ್ರುಗಾಣಿಕೆಯೊ
ನಿನ್ನಳೊದಿಸೆ ಗಗನೋಪಮ ಜವಾಹರ ಮಹೋದಯ?
ಭಾರತದ ಕಣ್ಮಣಿಯೆನೆ ಕತ್ತುರಿಯ ಕುಡಿಯೆನೆ
ಕುಲ ಪ್ರದೀಪ್ತಿಯೆನೆ ಜಗ ಕಲ್ಯಾಣಸಾಸಿಯೆನೆ
ಹಂಸತೂಲಿಕಾ ತಲ್ಪದಿ ಬೆಳೆದು ಸ್ವಾತಂತ್ರ್ಯ
ಯಜ್ಞದಿ ಸ್ಫುಟಿಸಿದನ ನಿಜ ಮಾತೃಕೆ ಪುಣ್ಯವತಿ!

— ೦ —

# ಮರುಧರೆಯಾ ಮುಂಬೆಳಸಂ!

ಕಲ್ಲಮೇಲೆ ಕಲ್ಲಿಟ್ಟು ಕೋಂಟೆಯ ಕಟ್ಟಿದೊಲ್
ಎತ್ತೆತ್ತಲು ಅರಿಮಚ್ಚರದ ನಿಡುಗೋಂಟೆ ಕಣಾ!

ಎಲ್ಲಿ ಹೆಜ್ಜೆ ಇಡಲಲ್ಲಿ ನೆತ್ತರಿನಾಸೆಯಿಂ
ಮುತ್ತ ಬಪ್ಪ ಕೆಂದಿರುವೆಯಂದದಿ ಪಡಿ ಬಹಂ!

ಇನ್ನೆಂತು ಸೈತಿಡಲಿ ನಿನ್ನಂ ಹೆ ಕಾವ್ಯಮತಿ?
ಬಿಡಲಾರೆ ನಿನ್ನ ನೆನೆ ಏಂಗೈಯಲೀ ಬನ್ನಂ?

ಮನತೇಜಿ ನಿಜಸ್ಫೂರ್ತಿ ವಂಚನಾಗಾಸಿಯಿಂ
ದಿಕ್ಕೆಡುತಿಹುದೈ ಚಣಚಣಕು. ನಿರ್ಲಕ್ಷ್ಯವೆ

ಮದ್ದೆಂಬೆನೆ ಅರೆ ತಪಂ 'ದರ್ಶನ' ಬಯಸಿದಂತೆ!
ಅನಿಷ್ಟದ ಮೂಸೆಯಲಿ ಸಂಜನಿಸೆಮ ಕವಿತಾ

ಕೂಸು ಪಾಲೆರವದಾರ್ ಸಂಪೋಷಿಸಲದಂ?
ತಳಿರು ಹೂಗಳ ಕಂಪು, ಕೋಗಿಲೆ ಕೊರಳಿನಿಂಪು

ಸುಳಿದು ಸುತ್ತ ಚೋದಿಸೆ ಕಾವ್ಯಸ್ಫೂರ್ತಿ ಭಾವಂ
ಎನೆ ತಿಳಿದು ನೋಡಾ, ಮರುಧರೆಯಾ ಮುಂಬೆಳಸಂ!

— ೦ —

# ಲೆನಿನ್

ತಣ್ಣೆತ್ತರ್ ಬಿಸಿಗೊಳ್ಳುವುದು ನಿನ್ನನ್ನು ನೆನೆಯಲ್
ದೂರ ಪ್ರಾಚ್ಯ ಸಂಭೂತಿ ರಸಋಷಿ ಲೆನಿನ್!

ನಿನ್ನ ಸರ್ವ ಸಮತಾಭೋಧೆ ಅರಸಂಗಣಂ
ಸಿಡಿಲ್ಮದ್ದು! ಮೇಣ್ ಕ್ಷಿಪ್ರತಾ ಸುಖ ಪ್ರಯಾಣಂ

ಸ್ವರ್ಗಾಲಯಕೆ! ನರನತಿಯಾಸೆಯ ತೊಡೆದೆಯೈ
ನಿಃಸ್ವಾರ್ಥತೆಯ ದೀಪದ ಕುಡಿ ಬೆಳಗಿಸೆ ನಿನ್ನ

ರಾಜ್ಯದಲಿ, ಹೆ ಬಡಜನ ಬಂಧು! ನೀನಹುದಯ್ಯ
ಕಾರುಣ್ಯ ಸಿಂಧು! ತೊಡೆಯೆ ಮಾತೆಯರ ಕಂಬನಿ

ನೀನಾಳ್ದೆ ಜನಪದಂ ಮನ್ನಣೆಗೊಳಿಸಿ ನಿನ್ನ
ನೀ ಗೆಲ್ದೆ! ಶಕ್ತಿ ಮಿಾರಿ ಶ್ರಮಿಸಿ ಬಲ್ಲಿದರ

ಬಗ್ಗು ಬಡಿದು ರಾಜ್ಯವ ಸೋಸಿ ತರತಮವಳಿಸಿ
ಸಿದ್ಧನೆನಿಸಿದೆ ಹೇ ಪರಮ ವೀರವರ ಲೆನಿನ್!

ನೀನಡೆದ ದಾರಿ ಜನ ಹಿತಕಾರಿ! ನಿನ್ನವರ
ವಾಙ್ಮಯ ಜಲಧಿ ಲೋಕ ಹಿತ ಪ್ರಪ್ರತಿಭಾ ಸೂಕ್ತಿ!

— o —

# ವಿಚಾರ

ಓ ಎನ್ನಯ ಕಟು ಮಧುರ ವಿಚಾರ ಸಂಪನ್ನ!
ಮರ್ಮಾಂತಿಕ ಮನದಲನ; ನಿದ್ರಾಹೀನ ಚಿಂತನ !
ಸ್ತಬ್ಧ ಪ್ರವೃತ್ತಿಯಿಂ ಅಮಿತ ಹೃದ್ರಕ್ತದಾನ!
ದಯಾಹೀನ ನಿಘೃಣ ನಿಪುಣ ವಿಚಾರ ನನ್ನಿಗ!
ತಥಾ ನ್ಯಾಯಾನ್ಯಾಯದ ವಿಮರ್ಶಣ ಚನ್ನಿಗ!
ದುರ್ನಿವಾರ ಸುಖದುಃಖ ಅದ್ಭುತ ಪ್ರಭಂಜನ!
ಮುಗ್ಧದುಗ್ಧ ಮನ ಮಥಿಸಿ ಸ್ನೇಹಾಶ್ರುವ ಕೆಡಗೆ
ಮಧುರ ಮಿಲನದ ಆತುರ ಕಾತರ ರಸಪಾನ!
ವಿದ್ರೋಹದ ವಜ್ರಾಗ್ನಿ ದಹಿಸೆ ತನುಮನ ಪ್ರಾಣ
ರುದ್ರಭೀಷಣ ಪ್ರವೃತ್ತಿಯಾವೇಶ ಚಣಚಣ!
ಸ್ವಚ್ಛಂದ ವೈಭವ ವಿಚಾರಗಾರ ಹೆ ಚಲುವ!
ನಿನ್ನಂಗ ಕಲ್ಮಶದ ಮಸೃಣೇ ಲೇಪನವ
ತೊಳೆದು ಸರ್ವತ್ರ ಶುದ್ಧಿಗೈಯಲ್ ಕರವಾಳವ
ಪಿಡಿದು ಭೋಂಕನಿರಿಯ್ಯೆ ಕೊನರಿದ ವಿಚಾರಂ!

— o —

# ಚೈತ್ರ ಚಿತ್ರಶಾಲೆ

ಅಹಃ! ಶುಭ್ರ ಗಗನದಿ ಚೈತ್ರ ಚಿತ್ರಾಶಾಲಾ
ಸುರನ್ಯಾಸ ದಿವ್ಯ ದರ್ಶಕರಿಗೆ ತೆರೆದಿದೆ ಕಣಾ!

ನೀಲ ಪಟಲದಮೇಲೆ ಪುಣ್ಯ ಜಲಧರಂಗಳ್
ಶ್ರಿಂಗಾರ ಗುಡಿಗೋಪುರದೊಲ್ಲೈಸಿ ಪ್ರವಹಿಸಿದೆ!

ಸೃಷ್ಟಿಶಿಲ್ಪಿಯ ಸುರವರ ಕಲಾಕೃತಿಗಾವುದು
ಸಾಟಿಯೈ ನರಕೃತಿಯೊಳ್? ಎನಿತು ಸೊಗಮಿಾ ಧರೆ!

ಭೀಮ ಭೀಷಣ ರಮ್ಯ ಶೈಲಿಯಲಿ ಮೈಯೊಡೆದ
ಅಪೂರ್ವ ಮಹಾತ್ಮಗ್ರಳೊ, ಹೆಣ್ಣು ಹಿಂಜಿದರಳೆಯ

ಹೇರಾಶಿಯೂ, ಬಾಲಕೃಷ್ಣ ಹರಿಸಿದ ದಧಿಘೃತದ
ಹಿರಿಹೊನಲೊ, ಶಿವ ಚೆಲ್ಲಿದ ದಿವ್ಯ ರಜತವಾರಿಯೆ

ಕಡಲ್ಲೈದಿದೆಯೊ ಎನೆ ಗಗನದ ಸೀಮೆ ಶೋಭಿಸಿದೆ
ಸಾಲ್ಗೊಂಡ ಪುಣ್ಯಮಿಾ ಪಯೋನಿಧಿ ರೂಪದಿಂ!

ಆವ ಕಾವ್ಯರಸಕಳಮಿದು ಪೇಳ್! ನೋನೋಡಿ
ದಣಿಯೆ ಕಣ್ ದೇವಿ ಕವಯಿತ್ರಿ ತಾ ಮಮ್ಮಲಂ!

— ० —

# ಪ್ರತೀಕ್ಷೆ

ತಲೆವಾಗಿಲಲಿ ನಿಂದು ಕುಂಭವಾರಿಯನಾಂತು
ಕಾವೆನನುದಿನಂ ಹಗಲುರುಳಿರುಳಿಪಂದು ಬಹೆ
ನೀನೆಂದು. ಎನಿತೆನಿತು ಸಮಯ ಸಂತು ನಿನ್ನಯ
ಪ್ರತೀಕ್ಷೆಯಲಿ ದೇವ! ಇದೊ ಮತ್ತೆಮೇಣ್ಮತ್ತೆ
ಕಾವೆ ಇರುಳುರುಳಿಹಗಲಿಪಂದು ಬರುವೆಯೆಂದು!
ಇನಿತರೊಳೆ ಬರದಿರ್ದ ನೋವು ಗಹಿ ಎದೆಯಣಂ
ತುಂಬಿ ಎಣೆಯಿಲ್ಲದಾಸೆ ಕುಡಿ ಮುರುಟಿರ್ದೊಡಂ
ರೋಷ ಬೇಸರಮಿಲ್ಲ ಮನದಲ್ಲಿ. ಹನಿತುಂಬಿ
ನಿರೀಕ್ಷೆಯಕ್ಷಿ ತಳತ್ತಳಿಸೆ ಅಳುವೆಂಬ
ಸೊಲ್ಲಿಲ್ಲ ಕೊರಳಲ್ಲಿ. ಕಾಲಯಾನವಗೈದು,
ಪೇಶದೆಲ್ಲೆಯ ದಾಂಟಿ ಸುತ್ತಾಡಿ ನಿನ್ನರಸಿ
ಸೋತು ಮೈಸೊರಗಿ ಬೆಂಡಾದರೇಂ ಕಾಂಬಾಸೆ
ಅಳಿಯಲಿಲ್ಲಮೆನೆ ತೆರೆದೆನ್ನೆದೆಗೆ ಹಾತೊರೆದು
ನೀ ಓಡಿ ಬರುವನ್ನೆಗಂ ಕಾವೆನುನುದಿನಂ!

— ೦ —

# ಕಸ್ತೂರಿ ಬಾ

ಸದ್ವಂಶದಲಿ ಸಂಜನಿಸಿ ನೀತಿ ನಿಯಮಗಳ
ನಿಡುಮಾಲೆ ಸೂಡಿ ಸುಕುಮಾರ ಮೋಹಕತೆಯಲಿ
ಬೆಳದ ವಜ್ರ ಕಠೋರ ಹೃದಯ ಬಂಧನ ಶೀಲೆ!
ಆರು ಕಂಡರಿಯದನುಪಥ ಪಿಡಿದ ಪತಿಯಣಂ
ಬೆಂಬಲಿಸಿ ಕಂಡೆಯೇಂ ಜೀವನ ಮಧುಮಾಸಂ?
ಸ್ವಾತಂತ್ರ್ಯ ಸಂಗ್ರಾಮ ಬಡಬಾಗ್ನಿಯಲಿ ಸೀಯೆ
ಕೊನೆಯರಿಯದಾ ಧರ್ಮ-ಕರ್ಮ ಚಕ್ರದಿಸಿಲ್ಕಿ
ಶಕ್ತಿ ಮಿಾರಿಗೆಯ್ದ ಪತಿ ಪರಾಯಣ ಸುಜಾಯೆ!
ಪರ ಸೇವೆಯಲಿ ಭೀಮಗಿರಿಯೆನೆ ಅಚಲ ಧಾತ್ರಿ!
ಭಾರತ ಸಿರಿವಸಿರಿಂ ಪೊಣ್ಮೆ ವರ ಜಗದಗಲ
ಕೀರ್ತಿವೆತ್ತ ಅಪೂರ್ವ ಧವಳಿಮಾ ಪ್ರದೀಪ್ತಿ!
ಗ್ರೀಷ್ಮ ಬೇಯೆ ಮನದಿ ಮಸಗಿ, ಮೃಗಜಲದೊಳೂಷ್ಮ
ಕೃಪೆ ಕನಸಿರೆ ಸವಿಗನಸು! ಸ್ವಾತಂತ್ರ್ಯ ಪೂರ್ವಮೆ
ಪತಿ ತೊಡೆಗೆ ದೇಹವಿಟ್ಟ ಕತ್ತುರಿ ಯಶೋಮಾ!

— o —

# ಪುಷ್ಪ ಮಾಧವೀ

ಕಾಲಾಂತರದ ತಪವು ಘನಿಸಿದೆ ದುರಂಧಾಮ
ನಳನಳಿಸಿ ಪಚ್ಚವಾರ್ಧಿ ತುಂಬಿ ತುಳುಕಿ ಹೇಮ
ಕರಂಡವೆ ಮಲರಿದೊಲ್ ಪುಷ್ಪಮಿಾ ಮಾಧವೀ!

ಪರಿಮಾರ್ಜನೆಯಾ ಸನ್ನಿಧಮೆನೆ ಪರಮಚ್ಛವಿ!
ಮಧು ವಸಂತನ ವೈಖರಿಯಲಿ ನಲಿಯುತ ಮಲರಿ
ಸ್ವಪ್ನ ಮಾಯೆಯ ಸುಂದರ ಗಾಥೆಯ ಹೋಲಿ! ದೊರೆ
ಝುಂಝಾನಿಲನಾವೇಗದಿ ಸಿಲ್ಕಿ ತಲೆದೂಗಿ

ಮುಗುಳ್ದೂಲಿನ ಮನ ಸಂಪತ್ತಿ ಲೀಲಾಯೋಗಿ!
ಸುರಸುಂದರುದ್ಯಾನ ಗಂಧ ವಾರಂವಾರ!
ಮನ ಮುದಿತ ಇಂದಿಂದಿರ ಝುಂಕೃತ ಝೇಂಕಾರ!
ಓ ಎನ್ನಯ ಚೆಲುವಿನ ಪೂವೆ! ಭೂಲೋಕ ವರ

ಹೃದ್ರಕ್ತದಿಂ ಮಲರಿದ ವ್ರೀಡಾ ಮಾನಿನೀ!
ಸುರಲೋಕದ ಸುರರ್ಕಳಿಗೂ ನೀನತಿ ಮಾನ್ಯ!
ಹಸುರ್ಪೊಟ್ಟಿಲ ಸುಮಶಿಶು ಸರುವರಿಗೂ ಸರಿಯೆ!

— o —

# ಭದ್ರಾ ಮರ್ದಾನಿ

ನೋಡೆ, ಕಣ್ಮಲೆತು ಭಾವಾತುರದಿ ನಿಶ್ಚಲಿಸಿ
ಅಸ್ತಮಾನ ವೈಖರಿಯ ವರ್ಣರತಿಯುಜ್ವಲಿಸಿ
ಏಂ ಮಮ್ಮಲಂ? ಏಂ ಸುರಮ್ಯಂ? ತವ ಭೀಷಣ
ಸುಖ ಸಲಿಲ ಸಂಯಾತ್ರಿ, ಹೆ ಭದ್ರಾ ಮರ್ದಾನಿ!

ಭೋರ್ಗರೆದು ಮುನ್ನುಗ್ಗೆ ಚಿತ್ತಮುತ್ತಾಗಿ ನೊರೆ
ನೊರೆಯೈಸಿ ಫೇನರಾಶಿಯ ಕಡೆದು ಸುರಮಧುರ
ಗೇಯದಿ ಒಲುಮೆಗಲಿಪೆ ಆಶ್ರಿತ ಚರಾಚರಗೆ
ಸನಾತನಿ ಸಾನುಭವೆ ಸರ್ವ ಮಂಗಳಾಂಗೀ!

ಭವಭವಗಳಾಚೆಯ ಮಹಾ ಮುನಿಜನಂ ಗೈದ
ತಪಸ್ಸಾರವಿಲ್ಲಿ ತೀರ್ಥವ್ವೈ ಸರ್ವತ್ರ ಸದಾ!
ಓವೋ! ಗ್ರೀಷ್ಮ ಹೃದಯದ ಸಂತಾಪಕೆ ನಿನ್ನಯ
ಗಂಧ ಮಧುರ ಸಲಿಲಂ ವರ ಚಿಕಿತ್ಸಾ ಮಹಾ

ಮಂತ್ರಂ! ತವ ಚೇತನ ಜಲಧಿಯಲಿ ಮುಳುಗೇಳೆ
ಅದಾವ ಮನವೊಲ್ಲದು ಪೇಳ್ ಪರಮ ಮಂಗಳೆ!

— o —

# ದೇವನಿಗೆ

ಭವ್ಯವೈಸಲೆ ದೇವ ತವಸೃಷ್ಟಿ ವೈಚಿತ್ರ್ಯ!
ನರಮತಿಗೆ ನಿಲುಕದ ಶತಕೋಟಿ ಸುರಮ್ಯತಾ
ಭೀಷಣ ರಚನಾಸ್ಫಾಲನಾ ಶೈಲಿಯ ಚಿತ್ರ!
ಯೋಚನಾತರಂಗತತಿ ತತ್ತರಿಸುತಿಹುದಮಮ!
ತವರುದ್ರ ಗಂಭೀರ ಮೌನ ಬಂಡೆಗವ್ವಳಿಸಿ
ಬಡಿದು ನುಚ್ಚುನೂರೆನೆ ಸಿಡಿವೋಗೆ ದಿಶೆದಿಶೆಗೆ
ಶಿಶುರುಚಿ ಕಲೆಯನೋಂತು ಭ್ರಮಿಸುತಿದೆ ಚಿತ್ತವೆಮ!
ಕರ್ಮಮಯಮಿಾ ಅದ್ಭುತ ಕ್ರಿಯಾಮಯಮಿಾ ರಸ
ಸಿದ್ಧಿಯೊಡೆದ ಚಿರ ಹರೆಯದೀ ಸುರಕಲೆಯ ಜಗ
ವೇತ್ತೃವೀ ಸಂಬುದ್ಧ ಶಾಸ್ತ್ರಜ್ಞತೆಯಿಾ ಪರಿ
ಜ್ಞಾನ ನಿನಗಿಲ್ಲದೊಡೆ ಎಂತರ್ಪುದೀ ಪೃಥ್ವಿ?
ನಿನ್ನ ಧ್ಯಾನಿಸಲಾಗದಲ್ಪಮತಿ ತಾ ದಿಟ್ಟಿ
ಹೋಹನ್ನೆಗಂ ಅಟ್ಟಿ ಹೊರಳುವುದು ನಿನ್ನಡಿಯ
ಹುಡಿಯಲಿ ವರ ಋಷಿಯ ಕಲಾಭಿಜ್ಞತೆಯ ಕೋರಿ!

— ೦ —

# ಹೇ ಎನ್ನ ಜೀವನ ನಾಥ

ಓ ಎನ್ನ ಜೀವನಿಯ ನಿರಂತರ ಸಹವಾಸಿ!
ಪುಟ್ಟಿದಾರಭ್ಯ ಕೆಳೆಕೊಂಡೆನ್ನ ಓಲೈಸಿ
ಸಂತಸಾಮೃತವಂ ಪಡೆದೆಯೇನ್ನೈ ಮನದಣಿಯೆ?
ಎಳೆತನದಿ ಧೂಳಾಡಿಸಿ ಧೂಳನೆ ಪಡೆದೆಯಾ
ಮೈಗೆ? ಹಿರಿತನದಿ ಅಜ್ಞಾನದ ತೆರೆಯನೊಸೆದು
ತಿಂದುದಜ್ಞಾನ ತುತ್ತು ಮೇಣ್ ವೃದ್ಧಗತಿಯಲಿ
ನೂರಾರು ಚಿಂತೆಯಲದ್ದಿ ನೋವಿನ ಬೀಡಾದೆ !
ಸುಖದುಃಖದೈಸಿರಿಯಂ ಲಕ್ಷ ಪಾತ್ರದಲಿ
ತುಂಬಿ ಓರಣೆಸಿಹೆ ಬಯಕೆಯ ಬಂಗಾರದೊಲ್!
ಏನನೆಂಬೆ ಇಂದು ಹೇ ಎನ್ನ ಜೀವನ ನಾಥ!
ಸೊಗಸಿತೆ ನಿನ್ನಗೆನ್ನೆಯ ನಿರಂತರ ಸಹವಾಸ?
ಈ ನಿರ್ಜನ ಧಾಮ, ಧರ್ಮ- ಕರ್ಮ ವರ್ಷಾ
ಶರದ್ಗ್ರೀಷ್ಮಹೃದಯದ ಕವಿ ಕಾವ್ಯ ಸಂಗೀತೆ
ಸರ್ವತ್ರ ನಿನ್ನನುಭವದ ಸಾರೂಪ್ಯಮಿಾ ಗಾಥೆ!

— o —

# ವಿಭಾವತೀ ದೇವಿ

ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ
ವೇದಭುವಿ ಕೃಷಿಗೈದ ನೀತಿ ಚಿಂತಾಮಣಿಯ
ನಲ್ಗತ್ತುರಿ ಜಗತ್ಪಾರಾವಾರದಿ ಪರಿಮಳಿಸೆ
ಯುಗಯುಗಾಂತರದಿಂ ಮನುಕುಲದುದ್ಧರಣ ಮೇಣ್
ಜನ್ಮಭೂಮಿಯುದ್ಧರಣ ದ್ವಿಪಕ್ಷ ಸಾಧನಾ-
ಶೀಲ ನಡೆದಿದೆ ಕಣಾ, ಪರಂಪರಾ ನಿಷ್ಠೆಯಿಂ!
ಪಾರತಂತ್ರ್ಯ ಶ್ವೇತಾಗ್ನಿ ಧಗಧಗಿಸಿ ಕರಿಮುರಿ
ಬೇಯುತಿರೆ ಭರತಖಂಡದದ್ಭುತ ವಿಸ್ತಾರ!
ವರ ಯೋಧನೆನೆ ಅಪ್ರತಿಮ ಸಾಸಿ ಧೀಮಂತ
ಸುತ ಸುಭಾಷ್ ಚಂದ್ರನ ರಾಷ್ಟ್ರರಕ್ಷೆಗಿತ್ತ
ಮಹಾ ಮಾತೃಕೆ ! ಜಾನಕೀನಾಥನರ್ಧಾಂಗಿ
ಶ್ರೀಮತಿ ವಿಭಾವತೀದೇವಿ ನಾಮಾನ್ವಿತೇ
ಅಷ್ಟ ಪುತ್ರವತಿ, ಮಂಗಳಾಂಗಾ, ಮಾತಾಮಯೀ
ನಮೋಸ್ತುತೇ ಚಿರಂತನ ಕೀರ್ತಿಶಾಲಿನೀ!

— । —

# ಧರೆಯಿಂ ಪೊರಡುವಂದು

ಪ್ರಭೋ! ನೆನವಿರಲೆನಗೆ ನಿನ್ನ ಪಾದಾಬ್ಜದಾ
ಜ್ಯೋತಿರ್ಕಿರಣ ಪಥಂ ಧರೆಯಿಂ ಪೊರಡುವಂದು!
ನಿನ್ನದೀ ಅದ್ಭುತ ಜಗಕ್ರೀಡಾ ವಿಲಾಸದ
ಸುಖದುಃಖವ ಭುಂಜಿಸಿ ನಿನ್ನ ನೆನೆವೆನಿಂದು
ಬಿಸುಸುಯ್ಲೆನಿತು ಹರಿಸಿದೆನನಿತು ಹಿತಶ್ವಾಸವ
ಸೆಳೆದೆ ಮನದುಂಬಿ! ಈ ಭವಾಲಯ ನಾಟಕವ
ನೋಡಿಹೆ ನಯನದ್ವಯದಿಂ ನಟನೆಯಿಾ ಅತೀವ
ದುಃಖದೀ ಅತುಲ ಭೋಗದೀ ಸಂಕಷ್ಟಮಿಾ
ರಾಗದ್ವೇಷಮಿಾ ಕೀಳ್ಚಪಲತೆಯ ನರಕಮಿಾ
ದಯಾ ಧಾರಿದ್ರ್ಯಮಿಾ ರೋಗವೈವಿಧ್ಯಮಿಾ
ತಥಾ ಸತ್ಯ-ಧರ್ಮ ಪರಿಪೋಷಣೆಯಿಾ ವಿವಿಧ
ಜಾಲವಂ ಪಸರಿಸಿದ ನಿನ್ನದ್ಭುತ ರೂಪದ
ವಿಶ್ವ ಮಹಿಮಾ ಸಂಕೀರ್ಣ ಪ್ರತಿಮೆಯನಂತು
ಭಾವಿಪ ನೆನವಿರಲಿ ಪಿಡೆಯೆ ನಿನ್ನ ಪರಮ ಪಥ.

— o —

# ಕಸೂತಿ ಕಲೆ

ಹೆ ರಾಮಾಭಿರಾಮೆ! ಧವಳ ಕೇಸರಿ ಸುನೀಲ
ರಾಗಾನುರಾಗೆ ! ಪಚ್ಚಪತ್ರೆ ಕುಮುದ ರೂಪೆ
ಶ್ವೇತ ಪದ್ಮೆ ಗೋರಂಟಿ ಗುಲಾಬಿ ಕನ್ನೈದಿಲೆ
ಇತಿ ವಿವಿಧ ಸುಮ ವಿರಾಜಿತ ಸಮುಚ್ಚಯ ಕಲಾ
ಕಲೆ! ಮಧುರಭಾವಸ್ಫೂರ್ತಿ ಸಂಭವೆ ನಮೋನಮೋ!

ಹಸ್ತಕೌಶಲದಿ ಮೈಯೊಡೆದುದ್ಯಾನ ಪ್ರತಿರೂಪೆ
ಸೌಂದರ್ಯದೈಹಿಕ ಸುಮಂಗಳೇ! ವಿಹಂಗಮ
ಕಾಜಾಣ ಮಿಡತೆ ಭೃಂದಾದಿ ಚಿರ ಸುಖಾಶ್ರಿತೆ!
ದಿನದಿನಂ ನಳನಳಿಸಿ ನೀ ವರ್ಣವರ್ಣಾಂತು

ಚೈತ್ರ ಚೇತನ ಪಡೆದು ಮನದ ದುಗುಡವನೆಲ್ಲ
ದೂರ ಸರಿಸುತಿಹೆ ನವ ಭಾವ ಬಂಧುರತೆಯಲಿ!
ವರಕಲಾ ತಪಸ್ವಿಯ ನಿರಸ್ತಿತ್ವವ ತಳ್ಳಿ
ರಸಸಿದ್ಧಿಯ ಕಿರೀಟವ ತೊಟ್ಟು ನೀ ತೊಡೆವೆಯ್ಯೆ
ಉಕ್ಕಿದ ಬಿಸುಗಂಬನಿ ತೋಷ ಘೋಷಿಣಿಯಾಗಿ!

— o —

# ಘೇ ಉಘೇ ಘೇ ಉಘೇ

ಘೇ ಉಘೇ ಘೇ ಉಘೇ ಚಂದ್ರಂಗತೊ ಮಾನವಃ!

ಹಾರೈಸಿ ಹಾರೈಸಿ ಕಡು ಸಾಸ ಕಾರ್ಯ
ಕೈಕೊಳೆ ಚತುರಮತಿ ದೃಢ ಸಂಯೋಜನೆಯಿಂದೆ

ಸ್ವಾಗತಿಸನೆ ತನ್ನುಡಿಗೆ ಸಂತಸದಿ ಚಂದ್ರಂ?
ಬಾಗಿಲಲಿ ಕಾದ ಘೋರ ಮೃತ್ಯುವಿನ ದರ್ಶನ

ಹಿಮ್ಮೆಟ್ಟಿಸಿತೆ ಪ್ರಾಚ್ಯ ಧೂರ್ತ ಸಾಸಶ್ರೀಯನೆ?
ಕೆಚ್ಚಿರೆ ಎದೆಯಲಿ ನೆಚ್ಚಿರೆ ಮನದಲಿ ಆವುದು

ಕೈಗೆಟುಕದು ಪೇಳ್ಕೈ, ಹೆ ನವಜೀವನದ ಬಂಧು!
ನೈಸರ್ಗಿಕ ನಿಗೂಢಂ ಸರ್ವತ್ರ ಸದಾ ಕರ್ಮ

ಚಿಂತನೆಯ ನಿರ್ವಾರ ಸ್ರೋತಧಾರೆಯಲ್ತೆ?
ಇಂದು, ಈ ವಿಜ್ಞಾನಯುಗೀಯ ಮಿಂಚಿನ ಧರ್ಮ

ನರಜನುಮದಾ ಅದ್ಭುತ ಪರಿಸ್ಕರಣಮಲ್ತೇ?
ಸುಜಲಾಂ ಸುಫಲಾಂ ಸಸ್ಯ ಶ್ಯಾಮಲಾಂ ಮಾತರಂ

ಆವುದರಲಿ ಕಡಿಮೆ ಸ್ವಸೊಬಗ ಕಾಣೆ ನಮ್ಮೊಳು?

— o —

# ಪ್ರವಂಚನ

ನಟ್ಟಿರುಳ ಶಾಂತಿಯಲಿ ನಲ್ಚಿಂತನೆಯು ಘನಿಸೆ
ಮನವನುಜ್ಜುತುಜ್ವಲ ಓಜೆಯಿಂ ಋಜುಗೊಳಿಸಿ
ತೆರೆದು ಬಾಗಿಲ ನಸುಕಿನಲಿ ಪೊರಪೊರಡಲ್ಯೆಸೆ
ಪಿಂತಿರ್ಕಿ ಭವಾಬ್ಧಿಯ ಕಾಮಕಾಮದೊಳದ್ದಿ

ಏಂಗೈದೆ? ಅರೆಚಣದಲಿ ಹೆಡೆಮುರಿಗಟ್ಟಿದೊಲ್!
ಹಾ, ನಿನ್ನ ಸೃಷ್ಟಿ ಪಥದಲಿ ಇಟ್ಟಣಿಸಿದೆತ್ತ
ವಿಚಿತ್ರ ಛಲನ ಜಾಲವಂ ಹರಡಿ ಸುಳಿಸುತ್ತಿ!
ಇಂತೇಕೆ ಮರೆಯಿಂದೆ ಮುಳಿಪೆನ್ನ ದಿನನಿತ್ಯ

ಭೀಷಣ ಕುಟಿಲತೆಗೆ ಮಿರು ವರ್ಣವ ನೆರೆ ಕೋದು?
ನಿನ್ನ ನಿಪುಣ ಹಸ್ತದ ಧೂರ್ತ ವಂಚನೆಗೆಲ್ಲಿದೆ
ಆದಿ-ಅಂತ್ಯ? ನೀನತಿ ಮಹತ್ತರ ಬೃಹತ್ತಮ!
ದೀನರ ಮುಳುಗಿಸೆ ನೀನಪಾರ ಜ್ಯೋತಿರ್ಮಹಿಮ!

ಓ, ಭೀಷಣ ಛಲನಾಮಯ! ಸಂಚಿತ ಕಾಲನ
ಸೂತ್ರದಾರ! ಅಕ್ಷಯ ಅಧಿಕಾರ ಪ್ರವಂಚನ!

— ೦ —

# ವಿಶ್ವಕವಿ ರವೀಂದ್ರ

ಜೀವನ ಮರುರಂಗವದು ಸರುವರಿಗೆ, ತರಿಸಲ್
ಕಷ್ಟನಷ್ಟ ಭೋಗಂ ತಾ ಪ್ರಥಮ ಗುರುವಲ್ತೆ?
ಅಂದು ಭಂಗ ಬೆಂಕೆಯೊಳ್ ಬೆಂದು ಸ್ಫುಟಿಸಿದ ನೀ
ಮಮ ಜನಪದಕೆ ಗುರುವೆನಿಸಿದೆ ಕವಿ ರವೀಂದ್ರನೆ!

ವೇದಾಂತ ಶ್ರೀಮಂತತೆ ಗೀತಾಂಜಲಿಯ್ಯೆಸಿ
ಅಮೃತವೊರೆಯೆ ಜಗದ್ಮರು ಭುವಿಯು ಹಂಬಲಿಸಿ
ತವ ಕೀರುತಿ ಹಬ್ಬಿತು ಜಗದಗಲ ಮುಗಿಲಗಲ
ಹೆ ಭಾರತ ನೇತ, ಶಾಂತಿ ನಿಕೇತನ ದಾತಾ!

ನೀನಹುದು ವೇದ ಭುವಿಯ ಮುದ್ದು ಕುವರ ಎನೆ
ಸಾಲ್ಗುಂ ಹೆ, ವಂಗ ಧೀಮಂತ ರಸ ಋಷಿವರನೆ!
ಉದಾತ್ತ ಗುಣ ಕೆಳೆಕೊಂಡ ಶಮಿಗಲ್ಲದೆಂತಣ
ಬಹುಮುಖ ಪ್ರತಿಭೆ ಮೇಣ್ 'ವಿಶ್ವಕವಿ' ಸನ್ಮಾನ

ಸಂತುಷ್ಟಿ? ತವ ನಾಮ ಚಿರಂ ಭಾರತ ಜ್ಞಾನ
ಸಂಪುಟದಿ ಎನಲಕ್ಕು. ಸ್ವೀಕರಿಸೆಮ ನಮನಂ!

— ೦ —

# ವಿಚಿತ್ರ ತಾನ

ವಿಸ್ತರಂ ಮಹಾ ವಿಸ್ತರಂ ವರ ಜಗತಂತ್ರಂ!
ಏಂ ಅದ್ಭುತ ವೈವಿಧ್ಯ? ಏಂ ಘನ ಸಂಪತ್ತು?

ಏಂ ನಿಗೂಢಮಿಾ ಮರ್ಮ? ಏಂ ಘನಾಯೋಜನಾ?
ಅರಿಯಲುಂಟೆ ಘನ ವಿಜ್ಞಾನ ನಿನ್ನಲ್ಪ ಕೋನ?

ಎನಿತೆನಿತು ನದ ನದಿ ಗಿರಿ ವನ ಬೆಂಗಾಡುಗಳ,
ಪಶು ಪಕ್ಷಿ ನರ ಕೀಟಗಳ ವಿಚಿತ್ರ ವಿಶಾಲ!

ವಿಜ್ಞಾನ ಮೊಳೆತು ಮಾರ್ಪೊಳೆಯೆ ಕಾಲದರ್ಪಣ
ತೋರದೇಂ ಅಜ್ಞಾನ ತಿಮಿರ ಕೋಶ ಭ್ರಮಣ!

ದಕ್ಷಿಣಧ್ರುವದೂರ್ಧ್ವದ ಮೇರೆಯಜ್ಞಾತ ತಾರೆ
ಸ್ಪರ್ಶಿಸಲ್ ಭ್ರಮಿತ ನಿರ್ನಿಮೇಷ ನಯನ ತಾರೆ

ಅದ್ಭುತ ಜಗದನಂತ ಛಾಯೆ ವಿಚಿತ್ರ ತಾನ!
ನಿಸ್ಸೀಮ ನೀಲಿಮಾ ರಂಗ ಅಶ್ರುತಗಾನ!

ಘನ ತುಷಾರ ತರಂಗತರಂಗ ಧವಳವಾರ್ಧಿ!
ಓವೊ! ಎನಿತು ಬಣ್ಣಿಸಲೇಂ ನಾ ವ್ಯರ್ಥಕಾಮಿ!

— o —

# ಸಂದುವಲವು ದಶಕಂ

ಸಂದುವಲವು ದಶಕಂ ನೆನಹಿನ ಗಣೆಯಿಂದಲಿ

ದೂರಾಗಿ ಕೋರೈಪ ಕುಳವಾಗಿ ಕಣ್ಗಡಲ
ಕೋಡಿಯಂ ಹರಸಿ ಹೇಳ ಹೆಸರಿಲ್ಲದವೊಲ್!

ಕರ್ಮದಿಂ ಧರ್ಮದಿಂ ಸಹನೆಯಿಂ ಧ್ಯಾನದಿಂ
ಸೇವಾ ಸೌಜನ್ಯದಿಂ ನಿಸ್ಪೃಹ ಭಾವದಿಂ

ಗೈದೀ ಜನ್ಮನೈವೇದ್ಯಕೆಂದಾದೊಡಂಬಹುದೆ
ಮಾನವೀ ಸಾಂತ್ವನಂ? ಹಾಯ್ ! ಈ ಸುಖದುಃಖ

ಯಶೋಪಯಶಂ ಇನಿತೀವುದೆ ತನುಮನ ಶಾಂತಿ?
ಅನಿಶಂ ಪೂಣ್ದು ಸ್ವರ್ಗಮರ್ತ್ಯಗಳ ಏಕಾ-

ಮಂತ್ರಣ ಮೆಲುಮೆಲ್ಲನೆ ಮುಟ್ಟೆ ಮನ ಶ್ಯೂನಗತಿ?
ಹಾ, ಏನನೆಂಬೆ ಭವಭವಾಂತರದ ಕರ್ಮವೆ

ಬಳಿಸಂದು ಮುಟ್ಟೆ ಸುಟ್ಟವೊಲ್ ಹೃನ್ಮುಕುಲವು
ಸೀದು, ಮಮ್ಮಳಿಸೆ ಮನಂ ಏಂಗೈಯೆ ತಿಳಿಯದೆನೆ

ನಿನ್ನ ಪಾದ ಮರೆಹೊಕ್ಕಿದೆನೊ ಹೆ ಜಗಜ್ಜನನಿ!

— o —

# ಬ್ರಹ್ಮಗಿರಿ

ಬ್ರಹ್ಮಗಿರಿಯಲಿ ಸಾರಿತು ಸಂಜೆ ಸೊಬಗಿನ
ಸಿರಿ ಸೂಸಿ. ಹೊಂಗದಿರನ ಶುಭ ಸಂದೇಶವನು ನರ

ನಾಡಿಗೊಯ್ಯುವ ತೆರದಿ. ಆವ ಸಗ್ಗ ಸಿರಿಯಿಾ
ಕ್ಷಿತಿಯೈಸಿರಿಗೆ ಸಮ? ನೀ ಆಪನಿತು ನೋಡ!

ಕಣ್ದಿಟ್ಟಿ ಸೋಲ್ವನಿತು ಪಂಕ್ತಿಪಂಕ್ತಿವೆತ್ತಿರೆ
ಗಿರಿ ಕಾನನ ಕಂದರಗಳ ಮಹಾ ಭುವನದೈಸಿರಿ;

ಶಿಶಿರಾನಿಲನ ಚಾಮರ ಸೇವೆಗೆಣೆಯಿಲ್ಲವು
ಎನೆ ಎಲೆ ಎಲೆಯಲಿ ಮರ್ಮರ ರುತಿ ಶ್ರುತಿಗಾನವು

ಮೊಳಗಿ, ನೀರ್ವಕ್ಕಿ ಬಾನಕ್ಕಿಗಳಲೊಡಗೂಡಿ,
ಸುರಪರ್ಣ ಸುರತರು ಸುರಾಂಗನೆಯರೋಡಾಡಿ,

ಸಹಸ್ರತರ ನಾದವಗ್ಗೈವ ಲಕ್ಷ ಮಧುಕರ
ಮಧುರಗಾನ ಸಿಂಧು! ಅದೊ ಮುಳುಗುತಿಹ ನೇಸರು

ಬ್ರಹ್ಮಗಿರಿಯ ಮಸ್ತಕದಲಿ ಹೊನ್ನ ರಾಜಿಯಂ
ಚೆಲ್ಲಿ, ಪರ್ಣಾರ್ಣವದಿ ನೆರೆಮಿಂಚಿ ಪಚ್ಚೆಯಂ!

— ೦ —

# ದುರ್ವಿಧಿಗೆ

ನನ್ನನೇಕಿಂತು ಕಾಡುತಿಹೆ ಹೆ ದುರ್ವಿಧಿಯೆ!
ಎಣೆಯಿಲ್ಲದೊಲು ಹಿಂಡುತಿಹೆ ತನುಮನವ ಸರಿಯೆ?
ಮೈಯಲಿ ನೆಣವಿಲ್ಲ; ಮನದಲಿ ಬಿಗಿಯಿಲ್ಲ; ಬರಿ
ನೋನೋಯುತಿರುವೆ ಕಳವಳದಲಿ ಸಿಲುಕಿ ಘೋರ
ತಾಪವಂ ತಾಳಲಾರದೆ ತಪಿಸಿ. ಬೇಡಿದುದ
ಕೊಡಲೊಲ್ಲೆ; ಬೇಡದುದ ನೀಡುವೆ ತಡಬಡಿಸದೆ;
ಆಸೆ ಮೂಡಿಸುವೆ ಕಾಂಚನವ ತೋರಿ ಕನ್ನಡಿ
ಗಂಟಾಗಿ ಕಾಡಿಸುವೆ; ಬೇಡಿಸುವೆ; ಬೇಡಿದೊಡೆ
ಈವೆನೆಂಬಾಸೆಗೆ ಕೊಡವನೆತ್ತಿ ನೀರೆರೆದು!
ಏಂ ಗೈಯಲಿ? ಎಂತು ಬಿಡುಗಡೆಯ್ಯೆ ನಿನ್ನಿಂದ?
ಇಂದು ನಿನ್ನೆಗಳಳುವೆ ನಾಳೆಯೆಡೆ ನುಗ್ಗುವೊಡೆ
ಕಾಡಿ ಬೇಡೆ ನೀನೇ ನೀವೆ ಪೊಸತಂ ವಿಧಿಯೆ!
ಭವದಾಸೆಯಿಂಕೋರಿ ಹೂಳೆತ್ತೆ ನಾಳೆ ಕೆರೆಯ
ಏಂ ಬಹುದು? ಸಾಕು ಇಂದಿನೋವೆ ನಾಳೆಗಿಂ

— ೦ —

# ಶ್ರೀಮಾತೆ

ತ್ಯಾಗಕ್ಕೆ ತತ್ವಕ್ಕೆ ಧರ್ಮಸಂಸ್ಕಾರಕ್ಕೆ
ಕಡೆದಿಟ್ಟ ದಿವ್ಯಚೇತನ ಮಣಿಯೆ ನೀನಕ್ಕೆ !
ವಿಧ್ಯಾಧರೆ ವಿಶ್ವಕುಟುಂಬಿನಿ ತವ ಜೀವನ
ಸತ್ಕೃತಿ ಸಾರ್ಥಕಂ ಜನ್ಮಜನ್ಮಾಂತರಕೆ!
ಅರವಿಂದೊ ಆಶ್ರಮ ತವ ನೀಡಂ ಶ್ರೀಮಾತೆ!
ಆದಿಶಕ್ತಿ ಸ್ವರೂಪಿಣಿ ಸ್ವೀಕರಿಸೆಮ ನಮನ
ನಿಯತಿ ಕೃತ ರಸಮತಿಯ ಗಂಧಶೀತಲ ತೀರ್ಥ
ಸೂಸಿ ಹಾದಿಯಂ ಕೋವೆ ಮಹತೋಮಹೀಯಕೆ!
ಪಾಶ್ಚಾತ್ಯ ಭುವಿಯಲಿ ಸಂಜನಿಸಿ ವಿಕ್ಷುಪ್ತ
ಜೀವನವ ತೊರೆದು, ಕೆಳೆಕೊಂಡು ಪ್ರಾಚ್ಯಧರ್ಮಮಂ
ನಿತ್ಯ ತಾರೆಯೊಲ್ ಉಜ್ಜಲಿಪ ಭಾರತಾವನಿ!
ದಾರಿ ದೀಪವೆನೆ ಬೆಳಗುತಿರಲಿ ತವ ಚೇತನ
ಸಮಗ್ರ ಭಾರತೀಯತ್ವದಲಿ ಸರ್ವತ್ರ ಸದಾ!
ಸಂಜೀವ ಸುಧಾಮಯಿ ಚಿರಧವಳೆ ಸು-ಮಿರಾರಾ!

— ೦ —

# ಬಿನ್ನಪ

ಎನ್ನಯ ಭಕ್ತಿಯಲಿ ಪಡೆಯಲೊಲ್ಲೆ ಸುಂಕವಂ
ಎನೆ ಚಿಂತೆಯಿಂ ಸಂತಸಗೊಳ್ವುದೆ ತವಮನಂ?
ಸಂಕಟದ ಕಾಣ್ಕೆಯಿದಂ ಬಾಳ್ಮೆ ಎನಗೀಯೆ
ನಿನ್ನನ್ನೇಕೆ ದೂರಲಿ ಮರ್ಮವರಿಯದೆ ದೊರೆಯೆ?
ಬಾಳ್ಮೆ ಕೈ ಬೀಸಿ ಕರೆದಂದು ಒಲ್ಲೆನೆಂದೆನೆ?
ನೇಹ ಬಂಧುರ ತುಂಬಿ ಎಂತು ಮರೆತೆ ನಿನ್ನನೆ!
ನಿನ್ನ ಸೇವೆಯೆನೆ ಹೆರಸೇವೆಗೆ ಮುಡುಪಿಸೆ, ಬದುಕು
ಪಡೆಕೊಂಡುದೇನು ತಲೆಬಾಗಿ ಕರ್ಮಾಂತರಕೆ?
ಬಯಸಿ ಸುಖ ಸಂಪತ್ತುಗಳಂ ತಾ ಆರ್ಜಿಸಿದ
ಗಂಟುಕಟ್ಟೆ ಸೆಣಸಿ ತನುಬಾಗಿ ಕುಸಿಯುವಂದು
ಕನಲುತಿರೆ ಮನಂ ಟಿಂಟಿಣಿಸಲುಂಟೆ ಬಾಯಿ?
ಕೆಚ್ಚಲುಣ್ಣೆಯಂದದಿ ಕಡು ನೆತ್ತರಕ್ಕರೆಯ
ಬಾಳಲುಗು ಕೊರಳಲಿರ್ಕೆ ಎದೆಗೆಡದೆ ನಿನ್ನಯ
ನೆನವೆನಗೆ ಕೊನೆವರಂ ಮರೆಯದೊಲಿರಿಸಯ್ಯಾ!

— o —

# ಕವಿಭೇರಿ

ಅದೋ ನೋಡಲ್ಲಿ ; ಅಲೆಯಲೆಯೈಸಿ ಹಬ್ಬುತಿವೆ
ಅಭ್ರಮನದಿ ಶುಭ್ರ ಮುಗಿಲ ಸ್ವಪ್ನರಾಶಿ; ಭವ್ಯ
ಮುಗಿಲೋಳಿಯ ಮೇಗಡೆ ಬಾಲ ಕೋಮಲ ಪುಷ್ಯ
ಚೇತನ ತರಣಿ! ತಳತ್ತಳಿಪ ಸ್ವರ್ಣವೇಶಿಯ
ರುಕ್ಮರುಚಿರ ಕಿರಣದ್ಯುತಿ! ನೀರವ ನೋಂಪಿಯ
ಪುಣ್ಯ ಭುವನ ಕೃತಿಯೈಸಿದ ಮಹಾ ರೋದಸೀ!
ಪಕ್ಷಿಗಳ ರಮ್ಯರುತಿ ನರ್ಮಶೀತಲ ಬನದಿ!
ಉಕ್ಕಿ ಹರಿದಿರೆ ಭಾವ ಸಂಲಗ್ನಮಾದುದೈ
ಚಿತ್ತಶಿವ ಮಂದಿರದಲಿ. ಮುಮುಕ್ಷವೀ ಹೃದಯ
ಸಾಮ್ರಾಜ್ಞಿ ಕಡೆದು ಕಾವ್ಯರಸವಂ ಮೈ ಮರೆಯೆ
ಕಲ್ಪವೆನಿತು ಜಾರಿತೊ ಅರಿಯೆನಾನಂದದಲಿ!
ರವಿಯೇಳ್ಗೆಯಲ್ಲಿ ಹಿರಿ ಮಂಜು ಹಿಂಜರಿವವೊಲ್
ಮನತಮಂ ಗಡ! ಸಾಧನಾಯಕ್ಷಿಣೆಯ ಭೇರಿ
ಮೈಮನದಲಿ ನಿಚ್ಚಗೊಳೆ ಇನ್ನೇಂ ಕವಿಭೇರಿ!

— ೦ —

# ಜೀವನ ಕಾವ್ಯಂ

ದೇವಾದಿದೇವತೆಗಳಿರಾ! ಮುನಿಜನಗಳಿರಾ!
ಮಲೆ ಕೋಗಿಲೆಗಳಿರಾ! ಇಳಾ ಮಾತೆಯರಿರಾ!

ಕೈಮುಗಿದು ಬೇಡುವೆನೊ ನಿಮ್ಮ ಪ್ರಾಂಜಲಿಯೊಡ್ಡಿ !
ವ್ಯರ್ಥ ಕಳೆದುದ್ದೆ ಜೀವನ ಆಶಾಮತಿಗೊಡ್ಡಿ!

ಧ್ವನಿಸುತಿದೆ ಧಣಧಣ ಎದೆ ನಿಬ್ಬಯಲ ಶೂನ್ಯ!
ಓದಲರ್ಥೈಸದು ಮನ ; ಬರೆಯಲೋಡದು ಲೇಖ;

ವಿಜ್ಞಾನದೆತ್ತರಕೆ ಏರದ್ದೆ ಕಿರುಜ್ಞಾನ!
ಹಾ, ಕಣ್ತುವಿವ ತಿಮಿರ ಕಾಯದ ಕರಿಯ ಕಾಂತಿ

ಹರಡಿದಟ್ಟ ಮುಂಗಾಣದೆ ಕಂಗೆಟ್ಟಿರುವೆನ್ನೈ
ಕರ ದೀಪವಂ ಬೆಳಗಿ ಮುನ್ನಡಸೆ ಬನ್ನಿರೈ!

ಮನಪಕ್ಷಿ ವಸುಧೆಯಿೀ ಮೃತ್ತಿಕಾ ಪಾತ್ರವಂ
ಸುಳಿಸುತ್ತಿ ವ್ಯಾಕುಲಸ್ವರಂ ಮಿಡಿದು ತಾನೈಸಿ

ವಿಶ್ವಾತ್ಮಕ ಭಾವದಿ ನವಬಿಂದು, ಉಜ್ವಲಿಸೆ
ನವನವೋನ್ಮೇಷಶಾಲಿನಿ ಜೀವನ ಕಾವ್ಯಂ!

— ೦ —

# ತುಂಗಾ

ಬ್ರಹ್ಮ ಪರ್ವತ ಪದತಲ ಪಾವನ ತರಂಗಿಣಿ!
ಕಲ್ಯಾಣಿ ಮನಮೋಹಿನಿ ಮಮ ನಿತ್ಯ ಸಂಗಿನಿ!
ವನವನಾಂತರಗಾಮಿನಿ ದಕ್ಷಿಣ ಪುಣ್ಯಜಲೆ,
ಸರ್ವ ಪಾಪನಾಶಿನಿ ಭೀಷಣ ಸರಸ ಸಲಿಲೆ,
ಹೇ ಅಲಂಕಾರಮಯಿ ಸಂಯಾತ್ರಿ ವರ ತುಂಗೆ!

ಘನ ನಿಬಿಡ ವನಘೋಷಿಣಿ ಫೇನೋದ್ಭವ ರಂಗೆ
ಸಂಧ್ಯೆಯಿಾ ಗೋಧೂಳಿ ಕವಿದ ರವ ಹೀನತಾ
ಮಧುರ ಶಾಂತಿ ಸುಷಪ್ತಿಯಂ ಕಡೆಯೆ ಸೊಗಮೆತ್ತು
ಸುರತೋಷವಂ ಸೂಸುವರಣ್ಯದ ನಿಡುಮಾಲೆ!

ವರ್ಣರಂಚಿತ ಕೋಮಲ ಕಿಸಲಯ ಸಿರಿಸಾಲ್!
ತಟಾಕದ್ವಯದಿ ಬಿಳಿ ಮಳಲ್ರಾಶಿ; ರಾಶಿ! ಅದೊ
ತೀಡಿ ಬಹ ಸುಯ್ಗಾಳಿ ನಿನ್ನುಡಿಗೆ! ಉಲಿಯುತಿದೆ
ಹೊದರೊಳಗೆ ಮಿಾಂಚುಳ್ಳಿ ಶ್ರುತಿಗೂಡಿ ! ಕಿರು ಝಿಲ್ಲಿ
ಝೇಂಕರಿಸಿದೆ ತವ ಮಂಜುಳರವಕೆ ಮನ ಚೆಲ್ಲಿ!

— o —

# ಬೆಳದಿಂಗಳೊರ್ಷಧಾರೆ

ಸವಿನಿದ್ದೆಯ ಮೋಡಿಯೊಳಿರೆ ವಿಶ್ರಾಂತ ಧಾತ್ರೀ
ಮೋನಮೈಸಿದ ರಾತ್ರಿಯಲಿ ಭ್ರಮಿಸುತಿದೆ ಶಾಂತಿ!
ತತ್ತರಿಸಿ ಅಶಾಂತಿಯ ಮೌಢ್ಯಗತಿ ಕಿಲ್ಬಿಷಂ
ಬಡಬಾಗ್ನಿ ಕುಲುಮೆಗೊಗೆಯೆ ತನುಮನ ಪುಳಕಿತಂ!
ತಾರಾ ಶಶಿ ನೀಹಾರಿಕಾಗ್ನಿಯ ಶಾಂತ ಶೀ-
ತಲ ಮಧುರವಾಹಿನಿ ಮಮಾತ್ಮ ಶಿವ ಮಂದಿರಕೆ
ಪರಬ್ರಹ್ಮತಾ ಪೂರ್ಣ ಪ್ರತಿಷ್ಠೆಯಭಿಷೇಕಂ!
ಬೆಳದಿಂಗಳೊರ್ಷಧಾರೆ ಕಾಲದೇಶದದ್ಭುತ
ಕಮಾನಿಪ ಕೋಟಿಕೋಟಿ ಯೋಜನೆಯಂ ದಾಂಟಿ
ಸಂಜೀವ ಸುಧಾ ವೀಚಿವೀಚಿಗಳನು ಮಿಾಂಟಿ
ಹೃತ್ ಬನದಿ ನಲಿವುಲ್ಲೋಲಕಲ್ಲೋಲ ಮಧುರತಿ!
ಅಕೊ, ತಮೋನಿದ್ರೆಯ ಜಡ ಚೇತನ ನೀರಸತೆ
ಮೈ ಕೊಡವಿ ರಸಕೆಣೆಯಾಗಿ ಜೀವೋತ್ಸವ ತೇರ್ಗೆ
ಗಾಲಿಯಪ್ಪಿ ನೂಂಕುತಿಹುದು ನನ್ನನೀ ಬಾಳ್ಗೆ!

— ೦ —

# ಮೊರೆಯಲೀ ಕರ್ಣ ಅನಿಶಂ!

ಕದ್ದಿಂಗಳ ರಾತ್ರೋರಾತ್ರಿ ಈ ಮಧುಕ್ಷಣ
ಶಾಂತ ಸಾಮ್ರಾಜ್ಯ ಮಂತ್ರ ಮುಗ್ಧ ದಿದೃಕ್ಷಣಂ !

ವೈಶಾಖ ಹೃದಯೂಷ್ಮ ಸಾಂತ್ವನಾ ಯಾಜನಂ
ಹಾ, ದುಂದುಗೈಯಲಲ್ಲನ್ಯರ ಸಮಯಮಿದಂ

ನುಡಿಗೆ ದುಡಿಯೆ ನಿನ್ನ ವರಪ್ರಧಾನಮೀ ಚಣಂ
ಬಾಳ್ಸಂಜೆಯಲಿ ಸಲಿಸಲೆಂದು ನಿನ್ನಯ ರಿಣಂ !

ಓವೊ ! ಉರುಳುರುಳಿ ಮೈಯೊಡೆದೆಲ್ಲ ತರಂಗಂ
ಒಕ್ಕೂಡೆ ತೆರ ಬಲ್ಲುದೆ ಕಡಲ ಮಹಾ ರಿಣಂ ?

ಇಂತಪ್ಪ ಸ್ವರ ಮಥನಮಾದೋಡೇಂ ಮಮ ?
ಸಾಧನಾ ಭಾಜನ ಗಡ ನೀನೆ ನಿರಂತರಂ.

ನಿನ್ನ ಕೃಪೆಯಿಲ್ಲದೆಲ್ಲಿಯ ನುಡಿಗುಡಿಯ ಪಥಂ ?
ಜನ್ನ ಸಿದ್ಧ ನೀಡಿರೆ ಸಾಗದೆಲ್ಲೀವರಂ ?

ಎಡರಿ ತೊಡರಿ ಪರಿಯೆ ಶತಧಾರೆಯಲಿ ಶ್ರೋತಂ
ನಿನ್ನೊಳೆಂತಂತು ಮೊರೆಯಲೀ ಕರ್ಣ ಅನಿಶಂ !

— o —

# ಟಾಲ್‌ಸ್ಟಾಯ್‌ಗೆ

ನೀನಿರುವನಕಂ ಮನ್ನಿಸಿದರೇಂ ದಾರ್ಶನಿಕ
ದೇಶೀಯರು ? ಬದುಕೆನಿತು ಮುಳ್ಳಾಯ್ತು ರಸಋಷಿ ?
ಮತಗಿತದ ಹೇಸು ಬೂಟಾಟಿಕೆಗೆ ಮನರೋಸಿ
ವೇದಾಂತದ ಸಾರವ ಸವಿದುಂಬಿ ಹಿಗ್ಗಳಿಸಿ
ಆತ್ಮ ಸಂಪುಟದಿ ಯೋಗ ಜೀವನ ಕೆಳೆಕೊಂಡು,
ತನ್ನವರ ತೊರೆದು ಭವದಾಸೆಯ ಕಿತ್ತೀಡಾಡಿ,
ದೂರ ಸಾರಿ ಮರಣಿಸಿದುದು ಧರ್ಮಕ್ಷುಧೆಗೇ
ಚಿರಾಮೃತದ ತುತ್ತೊ, ತನ್ನವರು ತೊರೆದಕ್ಕರೆಗೆ
ಜಂಕಣೆಯೊ, ಸಾಹಿತ್ಯಕೃಷಿಗೆರೆಗಿದಂಕುಶಮೊ,
ಬಾಳ್ಮೆಯುನ್ನತಿಗೆ ಪೇರ್ದ ಕೊಡಲಿಯೊ, ದರ್ಶನಕೆ
ಬಂದೊದಗಿದ ಕಂಟಕಮೊ, ಜಗದಿಟ್ಟಿಗೆ ಬಡಿದ
ಕೋಲಾಹಲಮೊ, ಮಚ್ಚಿದರಿಗೆ ನೆಚ್ಚಿನಚ್ಚರಿಯೊ
ಎನೆ ಬಳಲಿದ ಜೀವಂಗೆ ವಿಶ್ರಾಂತಿಯು ದೊರಕಿ
ಚಿರವಾಯ್ತು ತವನಾಮ ಜಗದಿ ಹೆ ವರ ಸಾಧಕ !

— o —

# ಬಾಳ ಪುಟದಲಿ

ಬಾಳಪುಟದಲಿ ನೀಬರೆದ ಮರಣದ ಮುನ್ನುಡಿ
ಹೃತ್ ಭಿತ್ತಿಯಲೊತ್ತಿ ಮರುಧ್ವನಿಪ ಚೆನ್ನುಡಿ!
ಚೈತನ್ಯದಗ್ನಿ ನದಿಗೆ ಹೊಂಗಳಸವನೂಡಿ
ವಿಸ್ಮೃತಿಭಾವದೊಳೆ ಕಾವ್ಯ ಕನ್ನೆಯನೊಲಿದು
ನಿಜ ನನ್ನಿಯ ಸಿರಿವಲಯಕೆನ್ನನೆ ನೂಂಕುತಿದೆ!

ನೋಡೆ, ಅಂದಿನಾ ಜನರಿಲ್ಲ ; ಕುಸುಮವಿಲ್ಲ ;
ಲಾವುಗೆ ಚೋರೆ ಕೋಗಿಲೆ ತೇನೆ ಶುಕಗಿಳಿಲ್ಲ ;
ಪೋಪರೆಲ್ಲ ಬಂದೊಲೆ ; ಭುವಿಯ ಬದುಕಿಗೆ ಹೆಸರೆ
ಸ್ಮಾರಕದ ಬಿತ್ತವಂ ಬಿತ್ತಿ ತಾವು ಸಂದರೆ?

ಎನಿತು ರಾಜ್ಯವಳಿದುವೊ ಮಂದಿಯೆನಿತು ಸಂದರೊ
ಕಾಂಬುದಾವುದಿನ್ನು ಬಯಸೆ ಬರ್ದಿನಬ್ದಿಯಲಿ?
ಕಲಾತ್ಮಕತೆಯೊಂದೆ ವರ ಮಾನವನ ಬರ್ದಿಲಂ.
ನೀನು ಹಾಡಿಸುವನಿತು ಹಾಡಿ ಕಾವ್ಯ ಸಸಿಯಂ
ನೆಟ್ಟೆನಿನ್ನಾನಂದದಿಂ ಸೇರುವೆನತೀತಂ !

— o —

# ಸತ್ಯಾವತಾರಿಣಿ

ಅಖಿಲ ಬ್ರಹ್ಮಾಂಡ ನಾಯಕಿ ವೇದ ಪೂಜಿತೇ,
ಸತ್ಯಾವತಾರಿಣೀ ಸುಜನಮನ ಸಂಪ್ರೀತೆ!

ಕರುಣೆಯಿಂದ ಬಾ ತಾಯಿ, ಬಾರೆ ಹೃನ್ಮಂದಿರಕೆ.
ಕಿರಿದಾದ ಮನ ತುಂಬೆ, ಬರಿದಾದ ಮನ ಬೆಳಗೆ,

ಸತ್ಯಾಮೃತ ಸುರಿದು ತಣಿಪ ಪೂರ್ಣ ಯೋಜನೆಗೆ.
ಸಕಲ ಸಂಸ್ಕೃತಿಗೆ ನೀನೆ ಬಲಮೆನೆ ಸುವಿಭಕ್ತೆ ;

ಸಮಗ್ರ ಜಗದ್ಭಾವಕೆ ನೀನಹೆ ಅವಿಭಕ್ತೆ ;
ಕಾಲದೇಶದಲಿ ವೇಷವೇಷಾಂತರಿಸಿ ಬಹೆ.

ನೀ ಹಿಂದುಳಿದೆಮ ಮಿಥ್ಯೆಯಲಿ ಸಿಲುಕಿಸುತಿಹೆ
ಓ ಭವ ವಿಧೂರೆ, ನಿತ್ಯ ಸತ್ಯಾವತಾರಿಣಿ!

ಇಲ್ಲಿ ಬಾ, ತಾಯಿ! ಸಂಭವಿಸೆಮ ಎದೆ ಗುಡಿಯಲ್ಲಿ,
ನೂರಾರು ಕುಟಿಲತೆಗಳ ನುಚ್ಚು ನುರಿಗೈಯಲ್,

ಮನಗೂಡಲಿ ಚಣದಿ ನಿನ್ನ ಸಮಧುರ ಸುಜ್ಞಾನ!
ಮೇಣರಿಯಲಿ ನಿರ್ಮಲ ಜೀವನ ಪಥಜ್ಞಾನ!

— o —

# ನುತಿಸುವೆನು ಸೆರಗೊಡ್ಡಿ!

ದೇವ ನಿನ್ನ ಸ್ತುತಿಯ ಬದಿಗೊತ್ತಿ ಬದುಕಲಳವೆ
ಭವತೋಯಧಿಯಲಿ ಬರಿ ಭೋಗಭಾಗ್ಯವ ಬೇಡಿ!
ಈರಡಿಯ ನರಮತಿಗೆ ಭಕ್ತಿಯೊರೆಹಚ್ಚದೊಡೆ
ಎಂತಳವು ಪೇಳ್ ಶ್ರೀ ಕಮಲಾಯತಾಕ್ಷನೆ!

ಎಲ್ಲರೊಳಿಹ ಕೈವಲ್ಯ ದೊರೆ ನೀನೆಂಬುದನು
ಬಲ್ಲೆನಾದೊಡಂ ದೃಢಸಂಕಲ್ಪ ಮಾಣೆನೊ
ಹೇ ಪ್ರಪನ್ನವತ್ಸಲ! ಕರುಣಾನಿಧಿ ಲಾಲಿಸೈ,
ಸಾನುರಾಗದಿಂದೆಮ ಹೃತ್ ಬಿನ್ನಪವನೀಸು.

ಕ್ಷುದ್ರ ಕಾಮಲಾಲಸೆಯಂ ಕಳೆದು ಶೀಘ್ರದಲಿ
ಕಾಯೆನ್ನ ದಾಸಾನುದಾಸಿಯಾ ನೇಮದಲಿ.
ಜಪಹೋಮವ್ರತಾದಿಗಳನೊಲ್ಲದ ಸಿರಿದೊರೆಯೆ,
ಶರಣುಪೊಕ್ಕವರಕ್ಕರೆಯಿಂದಲಿ ನೀ ಪೊರೆಯೊ

ವೃಷ್ಣೀಶ ನಿನ್ನ ಕರುಣಾದೃಷ್ಟಿಯಂ ಬೇಡಿ
ಕೈಮುಗಿದು ಕಣ್ಮುಗಿದು ನುತಿಸುವೆನು ಸೆರಗೊಡ್ಡಿ!

— o —

# ರಜನೀ ಗಂಧಾ!

ಪಡುದೇಶದ ಸುಂದರ ಸೀಮಾಪಥ ಕೆಂಗಲಿಸಿ
ಪೊಳೆದತ್ತು ಭಾಸ್ಕರನ ಭಯಂಕರ ಚಿತಿಯೊ ಎನೆ!
ಹೃದ್ರಕ್ತವ ಸುರಿದರ್ಘ್ಯವಂ ನೀಡಿ ಕೆಮ್ಮನೆ

ಸ್ವರ್ಣದುಂಡೆಯೊಲ್ ಸಂಭ್ರಮದಿ ರವಿಯಾಗಮಿಸೆ
ಎದುರುಗೊಳಲುಜ್ವಲಿಸಿತೊ ದಿಗ್ನಾರಿಯ ಹೃದಯ!

ಬಾಬಾರೆಮ ಕಾರುಣ್ಯಪಾತ್ರ! ಚಿತ್ ಕುವಲಯ!
ಕವಿತಾ ಮಿಮುಗ್ಧ! ಕಾದಿಹೆ ನೆನೆನೆನೆದು ನಿನ್ನ!

ಎಂದಾದರಿಸೆ ದಿಗಂಗನೆ ತಬ್ಬಿ ಸಂತಸದಿ.
ಮಂದಮಂದಾನಿಲಂ ತೀಡಿ ದಿಶೆದಿಶೆಯಿಂದೆ

ತಣ್ಣನೆಯ ತನಿಯಿಂಪು ಹೂಗಂಧದಲಿ ಕಲೆತು
ತಂದಿತು ಮನಕಾನಂದ ವರ ಜಗದಾದ್ಯಂತ!

ಹೃನ್ಮನಂ ತಣಿಸಿ ರವಿ ಅಸ್ತಮಿಸೆ ದಿನಾಂತದಿ
ಸಂಧ್ಯಾ ಸೊದೆಯಲಿ ಖಗಕುಲ ನಾದ ಸುಧಾನಿಧಿ

ಪರಿದು ಹರಡಿತೆಲ್ಲೆಲ್ಲೂ ರಜನೀ ಗಂಧಾ!

— o —

# ಜೀವನ ಸ್ಫೂರ್ತಿ

ನೀ ಬಲ್ಲೆ ಎನ್ನೊಳಿತಿನಾವಶ್ಯಂ ಮತ್ತೆ
ಇನ್ನೇನ ಬೇಡಲಿ ಹೆ ಪರಮ ಚಿನ್ಮಯಾತ್ಮ !

ಕರ ಜೋಡಿಸಿರೆ ಬೇಡಲು ಬಾಯಿ ಬರದು ಕಾಣಾ !
ನಿನ್ನ ಒಲವೇ ಬಲವು ; ನೀ ರಸಂ ಚೇತನಕೆ ;

ನೀನೆ ಬೆಳಕು ಕಣ್ಣಾಲಿಗೆ! ನೀನಹುದು ಸೇತು
ಇಹಪರಕೆ. ನಿನೊಲಿದು ಬಾರೈ ಎದೆ ಗೃಹಕೆ

ಹೆ ಮಮ ಜೀವನ ಪರಮ ಬಂಧು! ಕರುಣಾ ಸಿಂಧು!
ನರಳುತಿಹೆ ವಿಸ್ಮೃತಿ ಗಾಢಾಂಧಕಾರದಲಿ

ನಿನ್ನಾಗಮನವನ್ನೆದುರು ನೋಡುತಲನುದಿನ.
ಮಿಂಚುಳ್ಳಿ ತೇನೆ ಗಿಳಿ ಕೋಗಿಲೆಗಳ ಕೊರಳುಲಿ

ಸುಪ್ತ ಸ್ಮೃತಿ ಹೇಳಿಗೆಯ ಕದವಂ ತಟ್ಟುತಿರೆ
ಮಿಡುಕುವುದು ಮನಂ ಮಮ್ಮಳಿಪುದಾತ್ಮಂ ಕಾಣಾ!

ಆದೋಡೇಂ ನಿನ್ನ ದಯಮಿಲ್ಲದೆ ಚಲಿಪುದೆ ತೃಣ ?
ನೀನೆ ಸೃಷ್ಟಿ ಸಮಸ್ತಕೆ ಜೀವನ ಸ್ಫೂರ್ತಿಯೈ !

— ೦ —

## ಕೇಳಲೆ ಕಿವಿಯೆ ಮಧುರಗಾನಂ!

ಕಾಳಮೇಘ ಕೇಶಿನಿ ತಿಮಿರ ವಸನಧಾರಿಣಿ
ನಿಶಾರಾಣಿ ಅಸ್ತಮಿಸಿ, ಎಳೆ ಮಂಜಿನುಷಾಣಿ
ಮಿಸುನಿ ನಗೆ ಹೊನಲ ಹರಿಸಿ ನಲವಿಂ ಆಗಮಿಸೆ
ಧವಳರಾಗ ರಂಜಿಸಿತೊ ಧರಾತಲ ಪುಳಕಿಸಿ!
ಪಾತ್ರಃಸಮೀರಣಂ ಬೀಸುತ್ತೈತರೆ ಮುದದಿ
ಪುಣ್ಯ ತಟನೀತಟಗಳ ತನಿಗಂಪಂ ಮೆದ್ದು ;
ಪ್ರಭಾವಿಲಯದದ್ಭುತ ಸ್ಫೂರ್ತಿಜ್ವಾಲೆ ತುಳುಂಕಿ
ಸೃಷ್ಟಿ ಶಿಲ್ಪಿಯ ಸುವರ್ಣಯಕ್ಷಿಣಿಯು ಬಳುಂಕಿ
ಸಂಭ್ರಮದಿ ಪರಿದವೊಲ್ ಹಬ್ಬಿ, ಪ್ರಭು ವಸಂತನ
ಒಡ್ಡೋಲಗಂ ತೆರೆಯೆ ಬಾಲಕೋಮಲ ತರಣಿ
ಚಕ್ರವರ್ತಿಯೈಸಿ ಉದಿಸಿದನದೊ, ಮೂಡಣದಿ!
ಭೂಲೋಕ ಎಚ್ಚತ್ತು ಸಾವರಿಸಿ ಬನಬನದಿ
ಪುಟಿಪುಟಿದು ಕೋಗಿಲೆ ಶುಕಪಿಕ ಟಿಟ್ಟಿಭ ತೇನೆ
ಗಾನಗೈಯೆ ಕೇಳೆಲೆ ಕಿವಿಯೆ ಮಧುರಗಾನಂ!

— ೦ —

# ಮನ ಮತ್ತೇರಿ!

ಓ ತಾಯಿ ಭಾರತೀ, ಅನನ್ಯ ರಕ್ಷಕಿ! ನಿನ್ನ
ಬೇಡಿಕೊಂಬೆ ಕೊನೆಯಾಸೆಯಂ ಮುಂದಿಟ್ಟೆನ್ನ.
ಇಂದಿಲ್ಲ, ಮುಂದೆಲ್ಲಿ ಕಾಲನನ್ನ್ಯಾನ್ಯ ಮೆಡೆ
ಮುಂಗಟ್ಟಿ ಜೀವನಮಿದೆನ್ನ ಮರಣದಿ ಕೂಡೆ
ನೆರವೇರದಾಸೆಯಿಂದೆಲ್ಲೆನ್ನ ವಿಶ್ರಾಂತಿ?
ಘೋರಾಂಧಕಾರದಿಂ ನಿರಾನಂದಂ ಮೊಳೆತು
ಚಿತ್ತಭಿತ್ತಿಯ ಸೀಳೆ ನಿಸ್ಸಾರ ಚಿತ್ರ ಮಮ!
ಇದೆಕೊ ಇನ್ನೊಮ್ಮೆ ಬೇಡಿಕೊಂಬುವೆ ಮರುಜನುಮ
ನೀಡುವೊಡೆನಗೆ ನಿನ್ನ ಮೃತ್ತಿಕೆಯೆ ಪರಮಗತಿ!
ಗ್ರೀಷ್ಮವಳಿಯೆ ತರುಲತೆ ಶಾದ್ವಲಂ ತಲೆಯೆತ್ತಿ
ವರ್ಷಾಧಾರೆಯ ಪ್ರತೀಕ್ಷಿಪಂದದಿ ನಿನ್ನಯ
ಸುಖಾಶ್ರಯ ಬಯಸಿ ಬಲಗೂಡಿ ನವ ಜೀವನಿಯ
ರಸಚೇತನವೊಡೆದು ಹರುಷದಿಂದೆ ನವಿರೇರಿ
ನಿನ್ನ ಮಣ್ಣಲಿ ಮಣ್ಣಾಗುವೆ ಮನ ಮತ್ತೇರಿ!

— ೦ —

## ಹೆ ಕೃಪಾ ಶಂಕರಿಯೆ!

ಕಮನೀಯ ಕಠಿಣ ಭುವನ ಮಂಡಲವೆಲ್ಲ ತವ
ಸಂಮೋಹನ ವಿದ್ಯುದ್ದಾಲಿಂಗನದಿ ಸಿಲ್ಕಿ
ಹೊಂಗನಸ ನೇಯ್ವುದು ನನಸಿನ ಹಿರಿಯಾಸೆಯಲಿ!
ಹೆ, ಭುವನ ಮಹಾ ಯಾತ್ರಿಕರ ಚಿರಂತನ ಸಖಿಯೆ!
ನೀನೆ ಚಿತ್ಕಲೆ, ನೀನೆ ಪರಂಜ್ಯೋತಿ ನಿನ್ನಯ
ಸುಖಾಶ್ರಯದಿ ನಡೆದಿದೆ ವಿಶ್ವ ಮಾಯಾ ಚಕ್ರ.
ನಿನ್ನ ಪ್ರಕೃತಿ ನಿಯಮ ಸ್ಫೂರ್ತಿ ಬಿತ್ತು ಧರ್ಮಕೆ
ಓ! ಭೀಷಣ ಮನೋಹರ ಕರ್ಮಾಧಿಕಾರಿಣಿ!
ನಿನ್ನ ಭವ್ಯರಾಧನೆಗೆ ಕಾವ್ಯರಸಸೂಸೆ
ಕಾತರಿಸುತಿದೆ ಎದೆಯ ಕಿರುಹಕ್ಕಿ. ನೀ ಭವಿಸು
ಭಾವಕೋಶದಿ ಬಂಧುರ ಧಾರೆಯೆನೆ ಜಲಜಲನೆ
ಉಕ್ಕಿ ಹರಿಯಲಿ ಕಾವ್ಯಸುಧಾ ವಹ್ನಿ ಜಗವನು
ತುಂಬೆ, ಕವಯಿತ್ರಿ ಶತ ಸತ್ಯಗೀತ ಮುಖರಿತ
ವಸಂತದಿ ಧ್ಯಾನಘನಿಸು ಹೆ ಕೃಪಾ ಶಂಕರಿಯೆ!

— ೦ —

## ಮಲ್ಲಿಕಾ ಕೃತಿಗಳು

(ಕಾದಂಬರಿಗಳು)

೧. ಜೀವನಗಂಗಾ
೨. ಡಾ॥ ಅಘೋರ
೩. ಡಾ॥ ಕಮಲೇಶ್
೪. ವಂದೇ ಮಾತರಂ
೫. ಅನಂತಾನಂತದೆಡೆಗೆ
೬. ಮನೋನ್ಮಣಿ
೭. ಸಂತ್ರಾಸಿನಿ
೮. ಆಸೆಯ ಸುಳಿಯಲ್ಲಿ
೯. ಪದ್ಮಾಲಯ
೧೦. ಶ್ರದ್ಧಾಲಯ
೧೧. ಕಮಲಾನಿ ಕಥಾ

(ಕಥಾ ಸಂಕಲನ)

೧೨. ಬಹುರತ್ನಾವಸುಂಧರಾ
೧೩. ರತ್ನಗರ್ಭಾವಸುಂಧರಾ
೧೪. ಸುಧಾಮಣಿ
೧೫. ರಮಣೀಮಣಿ
೧೬. ಲಿಯೋನಾ
೧೭. ಶ್ರೀಮುಖಿ
೧೮. ಶ್ರೀಹರ್ಷಲಾ
೧೯. ವೈಶಾಖೀಪರ್ವ
೨೦. ಫಾಲ್ಗುಣೀಪರ್ವ
೨೧. ಮಣಿಮೇಖಲಾ
೨೨. ಮಣಿಕರ್ಣಿಕಾ

(ಕವಿತಾ ಸಂಕಲನ)

೨೩. ಪೂಜಾವಸಾನ ಸಮಯೇ....!
೨೪. ಧ್ಯಾನಾವಸಾನ ಸಮಯೇ....!
೨೫. ಗಗನ ಕುಸುಮ
೨೬. ಜೀವನ ಕುಸುಮ
೨೭. ಚಂಪಕರಾಜಿ
೨೮. ಬಕುಳ ರಾಜಿ
೨೯. ಕಸ್ತೂರಿ ಮಾಲಿಕಾ
೩೦. ಮಂದಾರ ಮಾಲಿಕಾ
೩೧. ವಿಜಯ ಗಾಥಾ
೩೨. ಗಾನ ತೀರ್ಥ
೩೩. ನಾದ ಬಿಂದು
೩೪. ಕಾವ್ಯಾನಂದ ನಂದಿನಿ
೩೫. ಭಾವಾನಂದ ನಂದಿನಿ
೩೬. ಸಂಗೀತ ಪುಷ್ಪಾಂಜಲಿ
೩೭. ಆತ್ಮ ಗೀತಾಂಜಲಿ

(ಸಂಜೀವನ ಕಾವ್ಯ)

೩೮. ಮಂಗಳ ಭಾರತಿ
೩೯. ಕಲ್ಯಾಣ ಭಾರತಿ
೪೦. ಉತ್ತರೋತ್ತರಣಿ
೪೧. ರಾಗಾನುರಾಗಿಣಿ
೪೨. ಪ್ರಫುಲ್ಲ ಭಾರತ

(ಪೌರಾಣಿಕ ನಾಟಕ)

೪೩. ಪುಣ್ಯಾಭಿಸಾರ
೪೪. ಪುಣ್ಯಪಯೋನಿಧಿ

(ಸಾನೆಟ್‌ಗಳು)

೪೫. ತರಂಗಿಣಿ

(ಗದ್ಯಕಾವ್ಯ)

೪೬. ಐಂದ್ರ ಕೀರ್ತಿ ಕೇತನಂ

(ಉಪನಿಷತ್ಕಥಾ)

೪೭. ಕೃತಂ ಸ್ಮರ ಕ್ರತುಂ ಸ್ಮರ

(ಶಿಶು ಸಾಹಿತ್ಯ)

೪೮. ದೂರ ದೇಶದಲ್ಲಿ
೪೯. ಬೆಳದಿಂಗಳ ರಾತ್ರಿ
೫೦. ರಂಗನ ಸಾಹಸ
೫೧. ಓಹಿಯೋಜ ಸರೋವರ
೫೨. ಕೌಶಿಕನ ಗೊಂಬೆ
೫೩. ವಿಶೇಷ ಸುದ್ದಿ
೫೪. ಕಲ್ಯಾಣಿ ರಾಗಿಣಿ

(ಮಹಾಕಾವ್ಯ)

೫೫. ಶ್ರೀ ವಿವೇಕಾನಂದ ವಿಜಯಂ